# ಹೆಣ್ಣುಮಕ್ಕಳ ವಿವಾಹ ವಯಸ್ಸು

## ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕಿ
ಗೀತಾ ಮಲ್ಲೇಶಪ್ಪಾ

ಮಾರ್ಗದರ್ಶಕರು
ಡಾ. ಎಂ. ಉಷಾ
ಅಧ್ಯಾಪಕರು





ಮಹಿಳಾ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೩ .

# ಹೆಣ್ಣುಮಕ್ಕಳ ವಿವಾಹ ವಯಸ್ಸು

## ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಹಿಳಾ ಅಧ್ಯಯನ ವಿಭಾಗಕ್ಕೆ
ಎಂ.ಫಿಲ್.ಆಂಶಿಕ ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)

ಸಂಶೋಧಕಿ

ಗೀತಾ ಮಲ್ಲೇಶಪ್ಪಾ

ಮಾರ್ಗದರ್ಶಕರು

ಡಾ. ಎಂ. ಉಷಾ

ಅಧ್ಯಾಪಕರು



ಮಹಿಳಾ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಏಪ್ರಿಲ್ ೨೦೦೩

# ಪ್ರಮಾಣ ಪತ್ರ

ಹೆಣ್ಣುಮಕ್ಕಳ ವಿವಾಹ ವಯಸ್ಸು : ಒಂದು ಅಧ್ಯಯನ ಎಂಬ ನಿಬಂಧವನ್ನು ಡಾ. ಎಂ. ಉಷಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್ ಪದವಿಗಾಗಿ ಭಾಷಾ ನಿಕಾಯದ ಮಹಿಳಾ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು. ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

Geetha

ಗೀತಾ ಮಲ್ಲೇಶಪ್ಪಾ
ಎಂ.ಫಿಲ್.ವಿದ್ಯಾರ್ಥಿನಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 29/4/03



## ಮಾರ್ಗದರ್ಶಕರ ಪ್ರಮಾಣಪತ್ರ

ಹೆಣ್ಣುಮಕ್ಕಳ ವಿವಾಹ ವಯಸ್ಸು : ಒಂದು ಅಧ್ಯಯನ ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಕುಮಾರಿ ಗೀತಾ ಮಲ್ಲೇಶಪ್ಪ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಎಂ. ಉಷಾ
ಮಾರ್ಗದರ್ಶಕರು ಮತ್ತು ಅಧ್ಯಾಪಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಸ್ಥಳ : ವಿದ್ಯಾರಣ್ಯ
ದಿನಾಂಕ : 29.4.03

# ಪರಿವಿಡಿ

## ಪ್ರಸ್ತಾವನೆ

ವಿವಾಹವು ಕುಟುಂಬಕ್ಕೆ ಪೂರಕವಾದ ಸಂಸ್ಥೆಯಾಗಿದೆ. ವಿವಾಹವು ಇಂದು-ನಿನ್ನೆಯದಲ್ಲ. ವಿವಾಹದ ವಿಧಿವಿಧಾನಗಳು, ರೀತಿ ನೀತಿಗಳು ಹಾಗೂ ನಿರ್ಬಂಧ ಮತ್ತು ಪ್ರಕಾರಗಳು ಸಮೂಹದಿಂದ ಸಮೂಹಕ್ಕೆ ಭಿನ್ನವಾಗುತ್ತವೆ. ವಿವಾಹದ ಉದ್ದೇಶ ಮತ್ತು ಕಾರ್ಯವಿಧಾನಗಳ ಬಗ್ಗೆಯೂ ಬೇರೆ ಬೇರೆ ಸಮೂಹಗಳಲ್ಲಿ ಬೇರೆ ಬೇರೆ ವಿಚಾರಗಳೇ ಇವೆ. ಆದಾಗ್ಯೂ ವಿವಾಹ ವ್ಯವಸ್ಥೆ ಇಲ್ಲದ ಸಮಾಜವೇ ಇಲ್ಲವೆನ್ನಬಹುದು. ವಿವಾಹ ಸಂಸ್ಥೆಯು ಸಾರ್ವತ್ರಿಕವಾದುದು. ಅಂದರೆ ಈ ಸಂಸ್ಥೆಯು ಒಂದಲ್ಲೊಂದು ರೂಪದಲ್ಲಿ ಎಲ್ಲಾ ಸಮಾಜಗಳಲ್ಲಿಯೂ ಇರುತ್ತದೆ. ಎಲ್ಲಾ ಕಾಲಕ್ಕೂ ಇರುವುದನ್ನು ಕಾಣುತ್ತೇವೆ. ಕಾಲ ಪರಿಸ್ಥಿತಿಗಳಿಗೆ ಅನುಗುಣವಾಗಿ ವಿವಾಹದ ಪದ್ಧತಿಗಳಲ್ಲಿ ಅನೇಕ ವ್ಯತ್ಯಾಸಗಳು ಕಂಡುಬಂದರೂ, ಅದು ಮಾನವನ ಜೀವನದೊಂದಿಗೆ ಒಂದಾಗಿ ಬೆಳೆದುಬಂದಿದೆ. ಈ ಸಂಸ್ಥೆಯು ಧಾರ್ಮಿಕ ಸಂಸ್ಥೆಗಿಂತ ಪುರಾತನವಾದುದೆಂದು ಮನೋತಜ್ಞರು ಅಭಿಪ್ರಾಯಪಡುತ್ತಾರೆ. ಮಾನವನಿಗೆ ಜನನ, ಬಾಲ್ಯ, ಯೌವ್ವನ, ಮುಪ್ಪು, ಸಾವುಗಳು ಸಹಜವಾದಂತೆ, ವಿವಾಹವೂ ಕೂಡ ಸಹಜವೆಂದು ಸಮಾಜ ಭಾವಿಸಿದೆ. ವಿವಾಹ ಸಂಸ್ಥೆಯನ್ನು ಕಡೆಗಣಿಸಿ ಬಾಳಿದವರ ಹಾಗೂ ಬಾಳುತ್ತಿರುವವರ ಸಂಖ್ಯೆ ಅತಿ ವಿರಳ. ಸ್ತ್ರೀ ಪ್ರಮುಖ ಪಾತ್ರವಹಿಸುವ ವಿವಾಹವು ಆದಿಕಾಲದಿಂದಲೂ ಲಿಂಗ ತಾರತಮ್ಯವನ್ನು ಒಂದಲ್ಲಾ ಒಂದು ಬಗೆ ರೂಢಿಸಿಕೊಂಡು ಬಂದಿದೆ.

ವಿವಾಹ - ಇದೊಂದು ಸಾಮಾಜಿಕ ಸಂಸ್ಥೆ. ಮಹಿಳೆಗೆ ಸಮಾಜದಲ್ಲಿ ಗುರುತು ಹಾಗೂ ಅರ್ಥ ಪ್ರಾಪ್ತವಾಗುವುದೇ ವಿವಾಹದಿಂದ ಎಂದು ಹೇಳಲಾಗಿದೆ. ವಿವಾಹವೆನ್ನುವುದು ಮಹಿಳೆಗೆ ಬಂಧನವೋ ಅಥವಾ ಬಿಡುಗಡೆಯೋ ಇದೊಂದು ವಿಚಿತ್ರವಾದ ಪ್ರಶ್ನೆಯಾಗಿದೆ. ಸ್ವತಂತ್ರವಾಗಿ ತನ್ನ ಬದುಕನ್ನು ರೂಪಿಸಿಕೊಳ್ಳಲು ವಿವಾಹವು ಹೆಣ್ಣಿಗೆ ಅವಕಾಶ ಒದಗಿಸಬೇಕು. ಇದೊಂದು ಬಿಡುಗಡೆಯ ಗಾಥೆಯಾಗಬೇಕು. ಗಂಡು ಹೆಣ್ಣು ಕೂಡಿ ಕುಟುಂಬವೊಂದನ್ನು ಕಟ್ಟಲು ವಿವಾಹ ಅನುವು ಮಾಡಿಕೊಡಬೇಕು. ಆದರೆ ಪುರುಷಶಾಹಿಯು ವಿವಾಹವನ್ನು ಬಂಧನದ ಬೇಡಿಯನ್ನಾಗಿ ಮಾಡಿಬಿಟ್ಟಿದೆ. ನಮ್ಮ ಸಮಾಜದ ಸಂದರ್ಭದಲ್ಲಿ ಮಹಿಳೆಗೆ ಗಂಡನ ಆಯ್ಕೆಯ ಅವಕಾಶವಿಲ್ಲ. ಆಯ್ಕೆಗೆ ಅವಕಾಶವಿಲ್ಲವೆಂದರೆ ಅಲ್ಲಿ ಸ್ವಾತಂತ್ರ್ಯವಿಲ್ಲವೆಂದೇ ಅರ್ಥ.

ತಂದೆ-ತಾಯಿಯರು ಹೆಣ್ಣು ಮಕ್ಕಳ ವಿವಾಹವನ್ನು ಕಷ್ಟ ಪರಿಹಾರದ ಒಂದು ಹೊಣೆಯನ್ನಾಗಿ ಪರಿಭಾವಿಸುತ್ತಾರೆ. ಹೆಣ್ಣನ್ನು ಆದಷ್ಟು ಬೇಗ ಗಂಡನ ಮನೆಗೆ ಕಳುಹಿಸಬೇಕೆಂದು ತಂದೆ - ತಾಯಿಯರ

ಅವಸರ. ಏಕೆಂದರೆ ಹೆಣ್ಣು ಒಂದು ಬಗೆಯ perishable goods ಅದನ್ನು ಬಹಳ ವರ್ಷ ಇಟ್ಟುಕೊಳ್ಳಲಾಗದು ಎಂಬುದು ಅವರ ನಂಬಿಕೆ. ವಿವಾಹದಿಂದಾಗಿ ಮಹಿಳೆ ತವರನ್ನು ಕಳೆದುಕೊಳ್ಳುತ್ತಾಳೆ. ಪಾಲಕರ ರಕ್ಷಣೆಯ ಭದ್ರತೆಯ ಸವಲತ್ತನ್ನು ಕಳೆದುಕೊಳ್ಳುತ್ತಾಳೆ. ಈ ವಿವಾಹವು ಗಂಡಿಗೆ ಅನೇಕ ಸಂಗತಿಗಳನ್ನು ಒದಗಿಸಿದರೆ ಹೆಣ್ಣಿನಿಂದ ಅನೇಕ ಸಂಗತಿಗಳನ್ನು ಕಸಿದುಕೊಂಡು ಬಿಡುತ್ತದೆ. ನಮ್ಮ ಸಮಾಜದ ಸಂದರ್ಭದಲ್ಲಿ ವಿವಾಹವು ಗಂಡಿಗೆ ಮಹಿಳೆಯ ಮೇಲೆ ಅಧಿಕಾರವನ್ನು ಒದಗಿಸುತ್ತದೆ. ಮಹಿಳೆಯು ಗಂಡಿಗೆ ಅಡಿಯಾಳಾಗಿ ಬದುಕು ದೂಡಬೇಕಾದ ಪ್ರಮೇಯವನ್ನು ವಿವಾಹವು ಸೃಷ್ಟಿಸಿ ಬಿಡುತ್ತದೆ.

ಹತ್ತೊಂಬತ್ತನೆಯ ಶತಮಾನದಲ್ಲಿ ಅಂದು ಪ್ರಚಲಿತವಾಗಿದ್ದ ಬಾಲ್ಯ ವಿವಾಹಪದ್ಧತಿಯನ್ನು ವಿರೋಧಿಸಿ ಮಹಾದೇವರಾನಡೆ, ರಾಜಾರಾಮಮೋಹನ್ ರಾಯ್, ಡಿ.ಕೆ.ಕರ್ವೆ ಮೊದಲಾದ ಸಮಾಜ ಸುಧಾರಕರು ಆಂದೋಲನಗಳನ್ನು ನಡೆಸಿದರು. ಇದರಿಂದಾಗಿ ವಿವಾಹದ ವಯಸ್ಸನ್ನು ಹೆಚ್ಚಿಸುವ ಕಾನೂನು ಜಾರಿಗೆ ಬರಲು ಸಾಧ್ಯವಾಯಿತು. ೧೯೨೯ರ ಕಾನೂನು ವಿವಾಹದ ವಯಸ್ಸನ್ನು ಕನಿಷ್ಠ ೧೪ಕ್ಕೆ ಏರಿಸಿತಾದರೆ, ೧೯೫೫ರ ಹಿಂದೂ ವಿವಾಹ ಅಧಿನಿಯಮ ಕನ್ಯೆಯ ವಿವಾಹದ ವಯಸ್ಸನ್ನು ೧೫ಕ್ಕೇರಿಸಿತು. ೧೯೭೮ರ ಹಿಂದೂ ಅಧಿನಿಯಮದ ತಿದ್ದುಪಡಿಯು ಕನ್ಯೆಯ ವಿವಾಹದ ವಯಸ್ಸನ್ನು ೧೮ ವರ್ಷಕ್ಕೂ ಹುಡುಗನ ವಿವಾಹದ ವಯಸ್ಸನ್ನು ೨೧ಕ್ಕೂ ಏರಿಸಿತು. ಆದರೆ ಹಳ್ಳಿಗಳಲ್ಲಿ ಗುಡ್ಡಗಾಡು ಪ್ರದೇಶಗಳಲ್ಲಿ, ಅವಿದ್ಯಾವಂತರಾದ ಮತ್ತು ಬಡತನದಿಂದ ಕೂಡಿದ ಜನರಲ್ಲಿ ಇಂದಿಗೂ ಬಾಲ್ಯವಿವಾಹವು ಅಲ್ಲಲ್ಲಿ ಆಚರಣೆಯಲ್ಲಿರುವುದನ್ನು ನಾವು ಕಾಣಬಹುದು.

ವಿವಾಹ ಸಂಸ್ಥೆ ಮಹಿಳಾ ಜೀವನದ ಅಂತಿಮ ಗುರಿ ಎನ್ನುವ ಧೋರಣೆ ಕೊನೆಗೊಂಡು, ಸಮಾನತೆ ಹಾಗೂ ಸಹಬಾಳ್ವೆಯ ತತ್ವಗಳನ್ನು ಪ್ರತಿಪಾದಿಸುವಂಥ ಒಂದು ಸಂಬಂಧವಾದರೆ ಮಹಿಳೆಯರು ಎದುರಿಸುತ್ತಿರುವ ಅನೇಕ ವೈವಾಹಿಕ ಸಮಸ್ಯೆಗಳು ಕೊನೆಯಾಗುತ್ತದೆ. ಪ್ರಾಪ್ತ ವಯಸ್ಸಿನಲ್ಲಿ ಪ್ರಾಪ್ತ ಮಾನಸಿಕ ಸ್ಥಿತಿಯಲ್ಲಿ ಎಲ್ಲಕ್ಕಿಂತ ಮಿಗಿಲಾಗಿ ಸ್ವ-ಇಚ್ಛೆಯಿಂದ ವ್ಯಕ್ತಿಗಳು ಆರಿಸಿಕೊಳ್ಳುವ ಸಂಬಂಧವಾಗಿ ವಿವಾಹ ರೂಪುಗೊಂಡಾಗ ಮಾತ್ರ ಸಮಾಜದಲ್ಲಿ ಇಂದು ವಿವಾಹದ ಹೆಸರಿನಲ್ಲಿ ನಡೆಯುತ್ತಿರುವ ದೌರ್ಜನ್ಯಗಳು ನಿಲ್ಲುವ ಕಾಲ ಸನ್ನಿಹಿತವಾಗುವುದೇನೋ.

ಭಾರತೀಯ ಸಮಾಜದಲ್ಲಿ ವಿವಾಹ ಸಾರ್ವತ್ರಿಕವಾದಂಥ ಸಂಸ್ಥೆ. ಆಯ್ಕೆಯಾದ ಅವಿವಾಹಿತರಾಗಿ ಉಳಿಯುವ ಸ್ತ್ರೀ ಮತ್ತು ಪುರುಷರ ಸಂಖ್ಯೆ ಅತೀ ವಿರಳವಾಗಿದ್ದು, ಇದರಲ್ಲಿ ಪರಿಸ್ಥಿತಿಯ ಒತ್ತಡಗಳಿಂದ ಅವಿವಾಹಿತರಾಗಿ ಉಳಿಯುವರು ಹೆಚ್ಚು. ದೇಶದ ಒಟ್ಟು ಜನ ಸಂಖ್ಯೆಯನ್ನು ತೆಗೆದುಕೊಂಡರೆ ವಿವಾಹಿತರ ಸಂಖ್ಯೆಯೇ ಹೆಚ್ಚಾಗಿದೆ. ಭಾರತೀಯ ಸಮಾಜದಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ

ಅಂಶ. ಇಂದಿಗೂ ಅತೀ ಹೆಚ್ಚು ಸಂಖ್ಯೆಯ ವಿವಾಹಗಳು ಏರ್ಪಾಡುವ ವಿವಾಹಗಳೇ ಹೊರತು ಆಯ್ಕೆ ಆಧಾರಿತ ವಿವಾಹಗಳಲ್ಲ. ಸಂಗಾತಿಯ ಆಯ್ಕೆಯಲ್ಲಿ ಸಂಬಂಧಿಸಿದ ಸ್ತ್ರೀ-ಪುರುಷರಿಗೆ ಸ್ವಾತಂತ್ರ್ಯವನ್ನು ನೀಡಬೇಕೆಂಬ ಅಭಿಪ್ರಾಯಕ್ಕೆ ಇಂದಿಗೂ ವ್ಯಾಪಕ ಸಾಮಾಜಿಕ ಮಾನ್ಯತೆ ಇಲ್ಲವೆಂಬುದು ಉತ್ಪ್ರೇಕ್ಷೆಯಲ್ಲ. A (ಜೈವಿಕ ಮತ್ತು ಭಾವನಾತ್ಮಕ ಸಂಬಂಧಗಳಿಗಿಂತ ಜಾತಿ ಅಥವಾ ಧರ್ಮದ ಬಾಂಧವ್ಯವೇ ಹೆಚ್ಚು ಎನ್ನುವ ಪೋಷಕರಿಗೆ ತಮ್ಮ ಮಕ್ಕಳು ತೆಗೆದುಕೊಂಡ ನಿರ್ಧಾರವನ್ನು ಗೌರವಿಸುವಂಥ ಮನೋಭಾವನೆಗಳು ಇರುವುದಿಲ್ಲ.)

ಜಾತಿ ಮತ್ತು ಧರ್ಮವನ್ನು ಮೀರಿ ವಿವಾಹವಾದ ಪತಿ-ಪತ್ನಿಯರನ್ನು ಸಜೀವ ದಹನ ಮಾಡುವುದು, ಗುಂಡಿಕ್ಕಿಕೊಲ್ಲುವುದು ಅಥವಾ ನೇಣುಹಾಕುವುದು ಇನ್ನು ಮುಂತಾದ ಶಿಕ್ಷೆಗಳನ್ನು ವಿಧಿಸುವುದನ್ನು ನಾವು ಕಾಣಬಹುದು. ಆದರೆ ಸೀಮಿತ ಚೌಕಟ್ಟಿನಲ್ಲೆ ವಿವಾಹವಾಗಬೇಕೆಂಬ ಪರಿಸ್ಥಿತಿಯಿಂದ ಮಹಿಳೆ ಅಥವಾ ಪುರುಷರು ಹೊರಬಂದಿರುವುದನ್ನೇ ಸಕಾರಾತ್ಮಕ ಬೆಳವಣಿಗೆ ಎಂದು ನೋಡಬಹುದು. ವಿವಾಹ ಸಂಸ್ಥೆಯಲ್ಲಿ ಉಂಟಾಗಿರುವ ಗಮನಾರ್ಹವಾದ ಮತ್ತೊಂದು ಬದಲಾವಣೆಯೆಂದರೆ ಹೆಚ್ಚಿರುವ ವಿಧವಾ ವಿವಾಹಗಳ ಸಂಖ್ಯೆ. ೧೮೫೬ರಲ್ಲಿ ವಿಧವಾ ವಿವಾಹಕ್ಕೆ ಬ್ರಿಟೀಷ ಸರ್ಕಾರ ಮಾನ್ಯತೆಯನ್ನು ನೀಡಿದ ಮೇಲೆಯೂ ಅದಕ್ಕೆ ಸಾರ್ವಜನಿಕ ಮನ್ನಣೆ ದೊರೆಯಲಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ವಿಧವಾ ವಿವಾಹಗಳಲ್ಲಿ ಸಂಖ್ಯಾತ್ಮಕ ಹೆಚ್ಚಳ ಕಂಡುಬರುತ್ತಿರುವುದಷ್ಟೇ ಅಲ್ಲದೇ ಅವುಗಳ ಸಾಮಾಜಿಕ ಸ್ವೀಕೃತಿಯ ಪ್ರಮಾಣವು ಹೆಚ್ಚುತ್ತಿರುವುದನ್ನು ವಿವಾಹ ಸಂಸ್ಥೆಯಲ್ಲಿ ಆಧುನಿಕ ಕಾಲದಲ್ಲಿ ಕಂಡುಬರುತ್ತಿರುವಂಥ ಬದಲಾವಣೆ ಎಂದೇ ಹೇಳಬಹುದು.

ಮಹಿಳೆಯ ಮೇಲೆ ಬಲಾತ್ಕಾರವಾಗಿ ವಿವಾಹ ಸಂಗತಿಯನ್ನು ಹೇರುತ್ತಿರುವಂತಹ ಪ್ರವೃತ್ತಿಯಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆಯನ್ನಾದರೂ ಕಾಣುತ್ತಿರುವುದು ವಿವಾಹ ಎನ್ನುವ ಸಂಸ್ಥೆಯಲ್ಲಿ ಉಂಟಾಗುತ್ತಿರುವಂತಹ ಬದಲಾವಣೆಗಳಿಗೆ ದ್ಯೋತಕವಾಗಿದೆ. ವಿವಾಹ ಎನ್ನುವುದು ಇಬ್ಬರ ವ್ಯಕ್ತಿಗಳ ನಡುವೆ ಅವರ ಇಚ್ಛಾನುಸಾರ ಏರ್ಪಡುವ ಒಂದು ಸಂಬಂಧ ಎಂದು ಪರಿಗಣಿಸಬೇಕಾಗುತ್ತದೆ.

ಆಯ್ಕೆ ಆಧಾರಿತ ವಿವಾಹವಾಗಲಿ ಕುಟುಂಬದ ನಿರ್ಧಾರಕ್ಕೆ ಬದ್ಧವಾಗಿ ಏರ್ಪಟ್ಟ ವಿವಾಹಗಳೇ ಆಗಲಿ ವ್ಯಕ್ತಿಯ ಗೌರವ ಘನತೆಗಳನ್ನು ಕಾಪಾಡುವಂತಹ ವ್ಯವಸ್ಥೆಯಾಗಿ ರೂಪಿತವಾದಾಗ ಮಾತ್ರ ವಿವಾಹ ಸಂಸ್ಥೆಯಲ್ಲಿ ಬದಲಾವಣೆಗಳಾಗುತ್ತವೆ ಎಂದು ಹೇಳಬಹುದು. ಆದರೆ ಆಯ್ಕೆಯ ವಿಚಾರವನ್ನು ಗಂಡು ಹೆಣ್ಣುಗಳು ಗಂಭೀರವಾಗಿ ಪರಿಗಣಿಸುವುದಕ್ಕೆ ಪ್ರಾಪ್ತವಯಸ್ಸು ಹಾಗೂ ಅಪ್ರಾಪ್ತಮನಸ್ಸು ಬೇಕಾಗುತ್ತದೆ. ಆದ್ದರಿಂದಲೇ ವಿವಾಹ ಸಂಸ್ಥೆಯ ಸಂದರ್ಭದಲ್ಲಿ ವಿವಾಹದ ವಯಸ್ಸು ಅತ್ಯಂತ ಮಹತ್ವದ ಅಂಶವಾಗುತ್ತದೆ.

## ಅಧ್ಯಯನದ ಉದ್ದೇಶ

ವಿವಾಹ ಸಂಸ್ಥೆಯಲ್ಲಿನ ಲಿಂಗ ಸಂಬಂಧೀ ಅಸಮಾನತೆಗಳು ಭಾರತಕ್ಕಾಗಲೀ, ಕರ್ನಾಟಕಕ್ಕಾಗಲಿ ಸೀಮಿತವಾಗಿರುವ ಸಮಸ್ಯೆಗಳಲ್ಲ. ಈ ಅಸಮಾನತೆಗಳು ಒಂದು ರೀತಿ ವಿಶ್ವದಾದ್ಯಂತ ಕಂಡುಬರುತ್ತವೆ.

ಉದಾ : ಕುಟುಂಬದಲ್ಲಿ ಹೆಣ್ಣು ಮಕ್ಕಳು ಮತ್ತು ಗಂಡು ಮಕ್ಕಳನ್ನು ಬೆಳೆಸುವಾಗ ಗಂಡು ಹುಡುಗ ರೆಂದರೆ ಧೀರರು, ಶೂರರು, ವಂಶೋದ್ಧಾರಕರು, ಮನೆಗೆ ಕೀರ್ತಿತರುವವರು ಎಂದೆಲ್ಲಾ ಹೇಳುವರು. ಆದರೆ ಅದೇ ಹುಡುಗಿಯನ್ನು ಚಿಕ್ಕಂದಿನಿಂದಲೂ ಹೆಣ್ಣು ಎಂದರೆ ಹೀಗೆ ಇರಬೇಕು ಮನೆಯ ಕೆಲಸ ಚೆನ್ನಾಗಿ ಮಾಡುವುದು ಕಲಿಯಬೇಕು, ಗುರುಹಿರಿಯರನ್ನು ಕಂಡರೆ ಅಂಜಿ ಭಯಭಕ್ತಿ ನಯ-ವಿನಯದಿಂದ ಇರಬೇಕು. ಹಾಗೂ ವಿವಾಹದ ಸಂದರ್ಭದಲ್ಲಿ ಅವಳಿಗೆ ಹೇಳುವ ಮೊದಲನೆಯ ಮಾತೆಂದರೆ "ತಮ್ಮ ಮನೆಯ ಕೀರ್ತಿ ಹೆಚ್ಚುವುದರೊಂದಿಗೆ ಗಂಡನ ಮನೆಯನ್ನು ಬೆಳಗುವಂತಾಗಬೇಕು" ಎಂದು ಹೇಳುವರು.

ವಿವಾಹವೆಂದರೆ ಗಂಡು ಮತ್ತು ಹೆಣ್ಣೆಂಬ ಇಬ್ಬರು ವ್ಯಕ್ತಿಗಳ ನಡುವೆ ಮಾತ್ರ ಏರ್ಪಡುವಂಥ ಒಂದು ಸಂಬಂಧವಲ್ಲ. ಈ ಸಂಬಂಧದಲ್ಲಿ ಎರಡು ಅಥವಾ ಹೆಚ್ಚಿನ ಸಂಖ್ಯೆಯ ಕುಟುಂಬಗಳು ಕೂಡ ಬಂಧಿತರಾಗುತ್ತಾರೆ. ಭಾರತೀಯ ಸಮಾಜದಲ್ಲಿ ಹೆಣ್ಣೊಬ್ಬಳು ವಿವಾಹವಾಗುವುದು ಒಬ್ಬ ವ್ಯಕ್ತಿಯನ್ನು ಮಾತ್ರವಲ್ಲ ಒಂದು ಇಡೀ ಕುಟುಂಬವನ್ನು ಎನ್ನುತ್ತಾರೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಾಹ ಎನ್ನುವ ಸಂಬಂಧದೊಳಗೆ ಪ್ರವೇಶಿಸಿದ ಹೆಣ್ಣಿನ ಮೇಲೆ ಅನೇಕ ಜವಾಬ್ದಾರಿಗಳು ಬೀಳುತ್ತವೆ. ಹೀಗಾಗಿ ಬಹುತೇಕ ಸಂದರ್ಭಗಳಲ್ಲಿ ವಿವಾಹ ಎನ್ನುವ ಸಂಬಂಧ ಏರ್ಪಾಡುವುದೇ ಅಸಮಾನತೆಯ ತತ್ವವನ್ನು ಆಧರಿಸಿರುವುದರಿಂದಾಗಿ ಹೀಗಾಗಿ ವಿವಾಹ ಸಂಬಂಧದಲ್ಲಿ ಮಹಿಳಾ ಅಧ್ಯಯನವು ಈ ಕೆಳಗಿನ ಕೆಲವು ಅಂಶಗಳನ್ನು ಮಹತ್ವವೆಂದು ಭಾವಿಸುತ್ತದೆ.

೧. ವಿವಾಹವನ್ನು ಸ್ತ್ರೀಗೆ ಏಕೆ ಕಡ್ಡಾಯಗೊಳಿಸಲಾಗಿದೆ.

೨. ವಿವಾಹದ ನಂತರ ಸ್ತ್ರೀಯೂ ಪುರುಷನ ಸ್ಥಾನಕ್ಕೆ ವರ್ಗಾಯಿಸಿರುತ್ತಾಳೆ ಏಕೆ?

೩. ವಿವಾಹಿತ ಸ್ತ್ರೀ ಈ ಹೊತ್ತಿಗೂ ತಂದೆ, ತಾಯಿ ಎಲ್ಲಾ ಹಕ್ಕುಗಳಿಂದ ದೂರವಾಗಿರುತ್ತಾಳೆ ಏಕೆ?

೪. ವಿವಾಹಿತ ಸ್ತ್ರೀ ಪುರುಷನ ಅರ್ಧಾಂಗಿ ಎಂದು ಕರೆಯಲ್ಪಟ್ಟರೂ ಸಹ ಆತನ ಮನೆತನದ ಹಕ್ಕುಗಳಿಗೂ ಹೊರಗುಳಿಯುತ್ತಾಳೆ.

೫. ವಿವಾಹದಿಂದಾಗಿ ಅವಳನ್ನು ಸಾರ್ವಜನಿಕ ಜೀವನದಿಂದ ಬೇರ್ಪಡಿಸಬಹುದು.

೬. ವಿವಾಹವು ಕುಟುಂಬದೊಳಗಿನ ಸ್ತ್ರೀಯ ಪಾತ್ರವನ್ನು ನಿಯಂತ್ರಿಸುತ್ತದೆ.

ವಿವಾಹದ ಅನೇಕ ಆಚರಣೆಗಳೂ ಕೂಡ ಸ್ತ್ರೀಯ ಪರಾಧೀನತೆಯನ್ನೂ, ಪುರುಷನ ಪರಮಾಧಿಕಾರವನ್ನೂ ಎತ್ತಿ ಹಿಡಿಯುವಂಥವು. ಹೆಣ್ಣನ್ನು ಒಪ್ಪಿಸುವುದು, ಕನ್ಯಾದಾನ, ಕನ್ಯಾಸೆರೆಯಿಂದ ಬಿಡಿಸಿಕೊಳ್ಳುವುದು, ಹೆಣ್ಣಿಗೆ ಗಂಡನ ಮನೆಯೇ ಭೂಷಣ ಮುಂತಾದ ಪರಿಕಲ್ಪನೆಗಳು ವಿವಾಹ ಎನ್ನುವ ಸಂಸ್ಥೆಯ ಒಳಗೆ ಅಡಕವಾಗಿರುವ ಪುರುಷ ಪ್ರಾಧಾನ್ಯತೆಗೆ ಸಾಕ್ಷಿಯಾಗಿದೆ. ವಿವಾಹ ಮತ್ತು ಮಹಿಳಾ ಸಮಸ್ಯೆಗಳಿರುವ ಸಂಬಂಧ ಹಾಗೂ ಕೆಲವು ಪ್ರಮುಖವಾಗಿರುವ ವಿವಾಹ ಕೇಂದ್ರಿತ ಸಮಸ್ಯೆಗಳು ಎಂದರೆ ಬಾಲ್ಯವಿವಾಹ, ವಿವಾಹ ಸಂಸ್ಥೆಯ ಅನಿವಾರ್ಯತೆ, ವರದಕ್ಷಿಣೆ, ಬಹುಪತ್ನಿತ್ವ, ಕೌಟುಂಬಿಕ ಹಿಂಸೆ, ಪರಿತ್ಯಕ್ತತೆ, ವೈಧವ್ಯ ಈ ಸಮಸ್ಯೆಗಳಿಂದ ಮಹಿಳೆಯು ಇನ್ನೂ ಏಕೆ ಸಂಪೂರ್ಣವಾಗಿ ಹೊರಗೆ ಬರುತ್ತಿಲ್ಲವೆಂಬ ಕಾರಣಗಳನ್ನು ಪರಿಶೀಲಿಸುವುದು ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಹೆಣ್ಣು ಮಕ್ಕಳ ವಿವಾಹ ವಯಸ್ಸನ್ನು ಕುರಿತು ಮರು ಪುನರಾವಲೋಚನೆ ಮಾಡುವುದರೊಂದಿಗೆ ಹೆಣ್ಣಿನ ಜೀವನದಲ್ಲಿ ವಿವಾಹ ವಯಸ್ಸಿಗೆ ಪ್ರಾಮುಖ್ಯತೆ ನೀಡುವುದರಿಂದ ವಯಸ್ಸಿನ ಬದಲಾವಣೆಯ ಏರಿಕೆಗಳಿಂದ ಉಂಟಾಗಿರುವ ಸಾಧ್ಯತೆಗಳೇನು ಎಂದು ತಿಳಿದುಕೊಳ್ಳುವುದು ಉಪಯುಕ್ತವಾಗಿರುವುದಾಗಿದೆ.

ವಿವಾಹ ವಯಸ್ಸಿನ ಏರಿಕೆಯಿಂದಾಗಿ ಮಹಿಳೆಯರಿಗೆ ಆಗುತ್ತಿರುವ ಅನುಕೂಲತೆಗಳು ಮತ್ತು ಅನಾನುಕೂಲತೆಗಳಾವುವು ಎಂದು ಅರಿತುಕೊಳ್ಳುವುದು. ವಿವಾಹ ವಯಸ್ಸಿನಲ್ಲಿ ಏರಿಕೆಯಾದರೂ ಸಹ ಇದು ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಇರುವ ವಿವಾಹ ವಯಸ್ಸಿನ ಪ್ರಸ್ತುತದ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡುವುದೇ ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಹೆಣ್ಣುಮಕ್ಕಳ ವಿವಾಹ ವಯಸ್ಸಿನ ಬಗ್ಗೆ ಚರ್ಚಿಸುವ ಈ ಸಂದರ್ಭದಲ್ಲಿ ಎಲ್ಲಾ ಸಂಪ್ರದಾಯ ವಿಧಿ-ವಿಧಾನಗಳನ್ನು ಮಹಿಳೆಯರ ಮೇಲೆ ಹಾಕಿ ವಿವಾಹವೆಂಬುದು ಅವಳಿಗೆ ಅನಿವಾರ್ಯವಾಗಿದೆ ಎನ್ನುವ ಮನೋಭಾವನೆ ಮೂಡಿಸಿರುವುದರಿಂದಾಗಿ ಅವಳು ಅದರಿಂದ ತನ್ನ ಜೀವನಕ್ಕೆ ಮುಕ್ತಿಯಿಲ್ಲವೆಂಬ ರೀತಿಯಲ್ಲಿ ನಡೆಯುತ್ತಿರುವುದು. ಈ ವಿವಾಹ ಸಂಸ್ಥೆಯಿಂದ ಭದ್ರತೆಯನ್ನು ಪಡೆದುಕೊಳ್ಳುವುದು ಅತ್ಯವಶ್ಯಕವಾಗಿದೆ. ಆರ್ಥಿಕವಾಗಿ, ಸಾಮಾಜಿಕವಾಗಿ, ಕೌಟುಂಬಿಕವಾಗಿ ತಮಗೆ ದೊರೆಯುವ ಸಮಾನ ಹಕ್ಕುಗಳನ್ನು ಪಡೆದುಕೊಂಡಾಗ ಮಾತ್ರ ಅವಳು ಸ್ವತಂತ್ರವಾಗಿ ತನ್ನದೇ ಆದ ರೀತಿಯಲ್ಲಿ ಅಧಿಕಾರವನ್ನು ಸಂರಚಿಸಿಕೊಳ್ಳುತ್ತಾಳೆ ಎನ್ನುವುದು ಈ ಅಧ್ಯಯನದ ಉದ್ದೇಶವಾಗಿದೆ. ವಿವಾಹ ವಯಸ್ಸು ಅನ್ನುವ ವಿಚಾರಕ್ಕೆ ನಿರ್ದಿಷ್ಟ ಪಡಿಸಲಾದ ಪ್ರಸ್ತುತ ಅಧ್ಯಯನದ ಶೀರ್ಷಿಕೆ ತೋರಿಸುವ ಹಾಗೆ ಈ ಅಧ್ಯಯನ ಒಂದು ಲಿಂಗಸಂಬಂಧಿ ಅಧ್ಯಯನವಾಗಿದೆ.

## ಅಧ್ಯಯನದ ವ್ಯಾಪ್ತಿ, ಸ್ವರೂಪ

ಪ್ರಸ್ತುತ ಅಧ್ಯಯನವು ವಿವಾಹ ಕೇಂದ್ರಿತ ಅಂಶಗಳಲ್ಲಿ ಒಂದಾಗಿರುವ 'ಹೆಣ್ಣು ಮಕ್ಕಳ ವಿವಾಹ ವಯಸ್ಸು' ಎಂಬ ವಿಚಾರವನ್ನು ಸಮಸ್ಕೀಕರಿಸಿಕೊಂಡು ಅದರ ಸುತ್ತ ವಿಶ್ಲೇಷಣೆಯನ್ನು ನಡೆಸುವುದಾಗಿದೆ. ಈಗಾಗಲೇ ನಡೆದಿರುವ ವಿವಾಹ ವಯಸ್ಸಿನ ಕುರಿತ ಅಧ್ಯಯನಗಳನ್ನು ಪುನರ್ ಪರಿಶೀಲಿಸುವುದರೊಂದಿಗೆ, ನಿರ್ದಿಷ್ಟ ಕ್ಷೇತ್ರ ಒಂದನ್ನು ಗುರುತಿಸಿಕೊಂಡು ಅಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳುವ ವೈಧಾನಿಕತೆಯನ್ನು ಅಳವಡಿಸಲಾಗಿದೆ. ಇದರಿಂದ ಪ್ರಸ್ತುತ ಸಂದರ್ಭದಲ್ಲಿ ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಹೆಣ್ಣು ಮಕ್ಕಳ ವಿವಾಹ ವಯಸ್ಸನ್ನು ಕುರಿತ ಸ್ಪಷ್ಟ ಚಿತ್ರಣ ಈ ಅಧ್ಯಯನದಿಂದ ದೊರೆಯುತ್ತದೆ.

ಅಧ್ಯಯನದ ಕೇಂದ್ರಬಿಂದು ಹೆಣ್ಣು ಮಕ್ಕಳ ವಿವಾಹ ವಯಸ್ಸಿನ ಸಮಸ್ಯೆಯಾಗಿದ್ದು, ಅಪ್ರಾಪ್ತವಯಸ್ಸಿನ ವಿವಾಹವು ಅಧ್ಯಯನದಲ್ಲಿ ಕಾಣಿಸಿಕೊಳ್ಳುತ್ತದೆ. ಭೌಗೋಳಿಕವಾಗಿ ಈ ಅಧ್ಯಯನ ಕೆರೆಭೋಸಗಾ ಎಂಬ ಗುಲಬರ್ಗಾ ತಾಲ್ಲೂಕಿನ ಒಂದು ಹಳ್ಳಿಗೆ ಸೀಮಿತಗೊಳ್ಳುತ್ತದೆ. ೧೯೨೯ರಲ್ಲಿಯೇ ಹೆಣ್ಣುಮಕ್ಕಳ ವಿವಾಹ ವಯಸ್ಸು ಕುರಿತಂತೆ ಪ್ರಸ್ತುತ ಕಾಲಮಾನದ ಸಂಗತಿಗಳನ್ನು ಪರಿಶೀಲಿಸುವುದು. ಈ ಅಧ್ಯಯನದ ವಿವಾಹ ವಯಸ್ಸಿನ ಪುನಾರಾಲೋಚನೆಯ ಕ್ರಮವು ಮುಖ್ಯವಾಗಿ ಮೂರು ಪ್ರಶ್ನೆಗಳನ್ನು ಗಮನದಲ್ಲಿಟ್ಟು ಕೊಂಡುದ್ದಾಗಿದೆ.

೧. ವಿವಾಹ ಕೇಂದ್ರಿತ ಸಮಸ್ಯೆಗಳ ಸಂದರ್ಭದಲ್ಲಿ ವಿವಾಹ ವಯಸ್ಸಿನ ಪಾತ್ರ ಯಾವುದು.

೨. ವಿವಾಹ ವಯಸ್ಸಿನಲ್ಲಿನ ಬದಲಾವಣೆಯ(ಏರಿಕೆ) ಸಾಧ್ಯತೆಗಳನ್ನು ಗ್ರಾಮೀಣ ಪರಿಸರದಲ್ಲಿ ಗುರುತಿಸುವುದು.

೩. ವಿವಾಹ ವಯಸ್ಸಿನ ಏರಿಕೆಯಿಂದ ಹೆಣ್ಣು ಮಕ್ಕಳ ಜೀವನ ಸಂದರ್ಭದಲ್ಲಿ ಉಂಟಾಗುವ ಪರಿವರ್ತನೆಯನ್ನು ಅಭ್ಯಾಸಿಸುವುದು.

ಈ ಮೇಲಿನ ಮೂರು ತಾತ್ವಿಕ ಪ್ರಶ್ನೆಗಳೊಂದಿಗೆ ಇನ್ನೂ ಅನೇಕ ಅನುಷಂಗಿಕ ಪ್ರಶ್ನೆಗಳನ್ನು ಗುರುತಿಸಿಕೊಂಡು ಕೈಗೊಳ್ಳಲಿರುವ ಈ ಅಧ್ಯಯನವು ಕೆಳಕಂಡ ವಿಭಾಗ ಕ್ರಮವನ್ನು ಸ್ಥೂಲವಾಗಿ ಗುರುತಿಸಿಕೊಂಡಿದೆ.

ಅಧ್ಯಯನಕ್ಕೆ ಬೇಕಾದ ಅಂಕಿ-ಅಂಶಗಳು ಹಾಗೂ ಇತರೆ ಮಾಹಿತಿಗಳನ್ನು ಪ್ರಾಥಮಿಕ ಮತ್ತು ಅನುಷಂಗೀಕ ಮೂಲಗಳಿಂದ ಪಡೆದುಕೊಳ್ಳಲಾಗಿದೆ. ನಿರ್ದೇಶಾತ್ಮಕ ವಿಶ್ಲೇಷಣೆಗೆ ಪರಿಣಾತ್ಮಕತೆಯನ್ನು ನೀಡುವ ದೃಷ್ಟಿಯಿಂದ ಕೆಲವು ಸರಳವಾದ ಸಾಂಖ್ಯಿಕ ಸಲಕರಣೆಗಳನ್ನು ಬಳಸಿಕೊಳ್ಳಲಾಗಿದೆ.

ಅಧ್ಯಯನದ ಸಮಯ ಹಾಗೂ ಸಮಯೇತರ ಇತಿಮಿತಿಗಳನ್ನು ಗಮನದಲ್ಲಿಟ್ಟುಕೊಂಡು ಅಧ್ಯಯನದ ವಸ್ತುವಿಗೆ ಒಂದು ಕೇಂದ್ರವನ್ನು ನೀಡುವುದಕೋಸ್ಕರ ಆಯ್ದ ಕ್ಷೇತ್ರದಲ್ಲಿಯ ಒಂದು ನೂರು ಜನರಿಗೆ ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ. ಅದರ ಬಗ್ಗೆ ಪ್ರಾಥಮಿಕ ಮಾಹಿತಿಯನ್ನು ಪಡೆಯುವುದಕೋಸ್ಕರ ಒಂದು ಸಂದರ್ಶನ ಸೂಚಿಯನ್ನು ಬಳಸಿಕೊಳ್ಳಲಾಗಿದೆ. ಪ್ರಾಥಮಿಕ ಅಂಕಿ-ಅಂಶಗಳನ್ನು ಮೊದಲ 'ಕೋಡ್ ಸೀಟ್'ಗೆ ಪರಿವರ್ತಿಸಲಾಗಿದೆ.

## ಅಧ್ಯಯನದ ಮಹತ್ವ

೧೯೮೦ರ ನಂತರದಲ್ಲಿ ವರದಕ್ಷಿಣೆ, ಅತ್ಯಾಚಾರ, ಕೌಟುಂಬಿಕ ಹಿಂಸೆ ಉದ್ಯೋಗ ಸ್ಥಳದಲ್ಲಿ ದೌರ್ಜನ್ಯ ಇಂದಿಗೂ ಸಮಾಜದಲ್ಲಿ ಮಹಿಳೆ ಎದುರಿಸುವ ಈ ಸಮಸ್ಯೆಗಳಲ್ಲಿ ಏನೇನು ಭಿನ್ನತೆಯಿಲ್ಲ. ಪುರುಷ ಸ್ತ್ರೀಯ ಮೇಲೆ ಅನ್ಯಾಯ, ಅತ್ಯಾಚಾರ ಶೋಷಣೆಗಳನ್ನು ನಿರಂತರವಾಗಿ ನಡೆಸುತ್ತಲೇ ಬಂದಿದ್ದಾನೆ. ಈ ರೀತಿಯ ಪ್ರವೃತ್ತಿಗೆ ಕಾರಣವೇನು? ಇದರ ಪರಿಹಾರವೇನು ಎಂಬುದರ ಕುರಿತು ಆಳವಾದ ಅಧ್ಯಯನದ ಅವಶ್ಯಕತೆ ಹಿಂದೆಂದಿಗಿಂತಲೂ ಇಂದು ಜರೂರಾಗಿದೆ. ಒಂದು ಸಮಾಜದಲ್ಲಿ ಸೃಷ್ಟಿಗೊಳ್ಳುವ ಪ್ರಧಾನ ಸಂಸ್ಕೃತಿಕ ನಂಬಿಕೆಗಳು ಹುಟ್ಟುಹಾಕುವ ಸಂಪ್ರದಾಯಗಳನ್ನು ಮುರಿದುಕಟ್ಟುವ ನೆಲೆಯಲ್ಲಿ ಅಧ್ಯಯನ ನಡೆಯುವುದು ಅತ್ಯಂತ ಅವಶ್ಯಕವಾಗಿದೆ. ಪುರುಷ ಪ್ರಧಾನ ಕುಟುಂಬಗಳು ಇಂದಿನವರೆಗೂ ಸೂಕ್ಷ್ಮವಾಗಿ ಅವಲೋಕಿಸಿದರೆ ಪುರುಷ-ಸ್ತ್ರೀಯರಿಬ್ಬರನ್ನು ವಿಭಿನ್ನ ಘಟಕಗಳಾಗಿ ಕಾಣುತ್ತಾ ಬಂದಿರುವುದು ಮನದಟ್ಟಾಗುತ್ತದೆ. 'ಶಕ್ತಿ-ಅಶಕ್ತಿ'ಯ ಸ್ವರೂಪದಲ್ಲಿ ಪುರುಷ-ಸ್ತ್ರೀ ಬದುಕು ಭಿನ್ನದಾರಿಯಲ್ಲಿ ಸಾಗಿದೆ. ಶಕ್ತಿ ಪ್ರಧಾನ ವ್ಯವಸ್ಥೆ ಎಂದು ರೂಪಗೊಂಡಿತೋ ಅಂದಿನಿಂದಲೇ 'ಲಿಂಗಭೇದ ಸಮಸ್ಯೆ' ಹುಟ್ಟಿಕೊಂಡಿತ್ತೇಂಬುದರಲ್ಲಿ ಎರಡು ಮಾತಿಲ್ಲ. ಮೇಲು-ಕೀಳು ಬಲಶಾಲಿ-ಬಲಹೀನ ಇಂಥ ವಿಪರೀತ ಭಾವನೆಗಳು ಸಹ ಸ್ತ್ರೀ ಬದುಕನ್ನು ಧಾರುಣಗೊಳಿಸಿವೆ. ಈ ಶ್ರೇಣಿಕೃತ ವ್ಯವಸ್ಥೆಯು ಮಹಿಳೆಯರನ್ನು ಸಾಮಾಜಿಕವಾಗಿ ಹಿಂದೆ ಸರಿಸುತ್ತದೆ. ಏನೇ ಆದರೂ ಇಂಥ ಭಾವನೆಗಳಿಂದ ಪುರುಷ ಮುಕ್ತವಾಗಬೇಕಾದ ಅವಶ್ಯಕತೆ ಪರಂಪರಾಗತವಾಗಿ ರೂಢಿಸಿಕೊಂಡು ಬಂದಿರುವ ಹಾಗೂ ಚಾಲ್ತಿಯಲ್ಲಿರುವ ಸಾಮಾಜಿಕ ಮೌಲ್ಯಗಳು ಮುಖ್ಯವಾಗಿ ಪುರುಷ ಪ್ರಧಾನ ಸಮಾಜ ಸೃಷ್ಟಿಸಿದಂಥವು.

ಈ ಮೌಲ್ಯಗಳು ಮುಖ್ಯವಾಗಿ ಪುರುಷ ಪ್ರಧಾನ ಸಮಾಜ ಹಿತಕರ ಎಷ್ಟು ಸತ್ಯ? ಅವು ಬೇಕೆ? ಬೇಡವೇ? ಎಂಬುದನ್ನು ಗುರುತಿಸಿ ಕೊಳ್ಳುವುದು ನಮ್ಮ ಮುಂದಿರುವ ಬಹುದೊಡ್ಡ ಸವಾಲು ಸರ್ವಸ್ತ್ರೀಯರಿಗೂ ಎದುರಾಗುತ್ತಿರುವ, ಸಂವೇದನಾ ಶೀಲರನ್ನು ಸದಾ ತೀವ್ರವಾಗಿ ಕಾಡುವ ಈ ಸಮಸ್ಯೆ ನಿಜವಾಗಿಯೂ ಮೂಲ ಪ್ರಶ್ನೆಯಾಗಿದೆ. ಏಕೆಂದರೆ ಪುರುಷ ನಿರ್ಮಿತ ಮೌಲ್ಯಗಳು ನಮ್ಮ ಸಮಾಜದಲ್ಲಿ ಆಳವಾಗಿ ಬೇರುಬಿಟ್ಟಿರುವುದುರಿಂದಾಗಿ ಅದನ್ನು ಪ್ರಶ್ನಿಸುವುದು ಅಸಾಧ್ಯವೆನಿಸುತ್ತದೆ. ಪ್ರಜಾಪ್ರಭುತ್ವದ

ಯುಗದಲ್ಲಿ ಬದುಕುತ್ತಿದ್ದು ನಾಗರೀಕರೆನ್ನಿಸಿಕೊಂಡವರು ಕೂಡಾ ಸ್ತ್ರೀ ಅನಾಥೆ, ಅಬಲೆ ಎಂದೆಲ್ಲಾ ಹೇಳುತ್ತಿದ್ದಾರೆ. ಇದಕ್ಕೆ ಮುಖ್ಯ ಕಾರಣ ನಿರಂತರವಾಗಿ ಹರಿದು ಬಂದ ಸಂಪ್ರದಾಯನಿಷ್ಠ ಮೌಲ್ಯಗಳೇ ಆಗಿವೆ. ಸಮಾಜ ಈ ಮಾರಕ ಮೌಲ್ಯಗಳ ಹಿಡಿತದಿಂದ ಮುಕ್ತವಾಗಬೇಕು. ಮನೆ, ಮಕ್ಕಳು, ಸಂಸಾರದ ಬಗೆಗಿರುವ ಚಿಂತೆ ಗಂಡಸಿಗಿಂತ ಹೆಂಗಸಿಗೆ ಹೆಚ್ಚು. ಅವಳಲ್ಲಿ ಇರುವ ಈ ತುಡಿತವೇ ಅವಳನ್ನು ಆಸ್ಥಾನದಲ್ಲಿರಿಸಿದೆ. "ಮಹಿಳೆಯನ್ನು ಯಾರೂ ಪ್ರತಿಬಂಧಿಸಿಲ್ಲ, ಅವಳೇ ಬಂಧಿತಳಾಗಿದ್ದಾಳೆ" ಎನ್ನುವ ವಿವಾರಣೆಯು ಸಮಾಜದಲ್ಲಿ ಮೂಡಿದೆ.

ಇತಿಹಾಸದುದ್ದಕ್ಕೂ ವಿವಿಧ ಸಮಾಜ ವ್ಯವಸ್ಥೆಗಳಲ್ಲಿ ಮಹಿಳೆಯ ಸ್ಥಿತಿಗತಿ ಅತ್ಯಂತ ಶೋಚನೀಯವಾಗಿದೆ. ಆಕೆಗೆ ಸಿಕ್ಕಿದ್ದು ಮನೆಯೊಳಗಿನ ಪ್ರಪಂಚದ ಉಸ್ತುವಾರಿ ಬೆಟ್ಟದಷ್ಟು ಕೆಲಸದ ಹೊರೆಯ ಭಾರ! ಅವಳ ಕೆಲಸ ಎಂದಿಗೂ ಗಂಡು ಮಾಡುವ ಕೆಲಸಕ್ಕೆ ಸಮಾನವಾಗಿರುವುದಿಲ್ಲವೆಂಬ ಪೂರ್ವಗ್ರಹ ಪೀಡಿತ ಅಭಿಪ್ರಾಯ ಗಂಡಸಿನ ಮನಸ್ಸಿನಲ್ಲಿ ಬೇರೂರಿದೆ. ಮಾನವನ ಮೂಲಭೂತ ಹಕ್ಕುಗಳನ್ನು ಉಲ್ಲಂಘನೆ ಮಾಡಿದ ಸಮಾಜ ಗತಕಾಲದುದ್ದಕ್ಕೂ ಆಕೆಯನ್ನು ನರಳಿಸಿತು. ಜೀವನದ ವಿವಿಧ ಹಂತಗಳಲ್ಲಿ ಆಸ್ತಿ-ಪಾಸ್ತಿಯ ವಿಚಾರಗಳಲ್ಲಿ ನಿರ್ಧಾರ ತೆಗೆದುಕೊಳ್ಳಬೇಕಾದ ಸಂದರ್ಭಗಳಲ್ಲಿ ಮಹಿಳೆ ತಲೆ ಹಾಕುವಂತಿಲ್ಲ. ಎಲ್ಲೆಡೆಗೂ ಪುರುಷರದ್ದೇ ಅಧಿಪತ್ಯ. ಹೀಗೆ ಮನೆಯೊಳಗೆ, ಹೊರಗೆ ಯಾವು ಲೆಕ್ಕಕ್ಕೂ ಇಲ್ಲದ ಮಹಿಳೆಯರು ವರ್ಗ ಹಾಗೂ ಲಿಂಗಭೇದದಿಂದಾಗಿ ತತ್ತರಿಸಿ ಹೋಗಿದ್ದಾರೆ.

ಒಟ್ಟಿನಲ್ಲಿ ಸಾಮಾಜಿಕವಾಗಿ ಬೇರೂರಿದ ಮೌಲ್ಯ ಬದಲಾವಣೆಯ ಬಗ್ಗೆ ಮಹಿಳೆಯರು ಕ್ರಿಯಾಶೀಲರಾಗಬೇಕು. ಮಹಿಳೆಯರ ಬಗೆಗಿರುವ ಸಾಮಾಜಿಕ ಮೌಲ್ಯಗಳು ಸಮಗ್ರವಾಗಿ ಬದಲಾಗಲು ನಮ್ಮ ಬದುಕಿನ ಎಲ್ಲಾ ರಂಗಗಳನ್ನು ವ್ಯಾಪ್ತಿಗೊಳಪಡಿಸುವಂತಹ ಬೃಹತ್ ಪ್ರಮಾಣದ ಯೋಜನೆಗಳು ರೂಪುಗೊಳ್ಳಬೇಕು. ಜೊತೆಗೆ ಕಾಯ್ದೆ ಕಾನೂನು ಕೂಡ ಈ ನಿಟ್ಟಿನಲ್ಲಿ ಲಿಂಗಭೇದ ಸಮಸ್ಯೆಯ ನಿರ್ಮೂಲನೆ ಪೂರಕವಾಗುವಂತೆ ರಚಿತವಾಗಬೇಕು ಎಂಬುದೇ ನನ್ನ ಅಧ್ಯಯನದ ಹಿಂದಿನ ನಿಲುವುಗಳಾಗಿವೆ. ಸಮಾಜದಲ್ಲಿ ಸಂಪೂರ್ಣವಾಗಿ ಲಿಂಗಭೇದತೆ ಹೋಗಿ ಮಹಿಳೆಯರು ಪುರುಷರು ಎಲ್ಲಿಯವರೆಗೆ ಸಮಾನರಾಗಿ ಪರಿವರ್ತಿತವಾಗುವುದಿಲ್ಲವೋ ಅಲ್ಲಿಯವರೆಗೆ ಮಹಿಳೆ ಬದುಕು ಸುಧಾರಿಸಲು ಸಾಧ್ಯವಿಲ್ಲ. ಗ್ರಾಮೀಣ ಮಹಿಳೆಯರು ಕಾಯ್ದೆಕಾನೂನುಗಳ ಬಗ್ಗೆ ಎಷ್ಟು ಅರಿತುಕೊಂಡಿದ್ದಾರೆ. ತಮ್ಮನ್ನು ತಾವು ಸಮರ್ಥ ಹಾಗೂ ಸ್ವತಂತ್ರವಾಗಿ ಬದುಕುವ ನೆಲೆಯಲ್ಲಿ ತೊಡಗಿಸಿಕೊಂಡಿದ್ದಾರೆಯೇ, ಅದಕ್ಕೆ ಮಹಿಳಾ ಸಂಘಸಂಸ್ಥೆಗಳಿಂದ, ಸರ್ಕಾರದಿಂದ ಅವರಿಗೆ ಆಗಿರುವ ಪ್ರಯೋಜನಕಾರಿ ಅಂಶಗಳಿಂದ ಎಷ್ಟರ ಮಟ್ಟಿಗೆ ಅವರಿಗೆ ಮಾರ್ಗದರ್ಶನವಾಗಿವೆ. ಬಾಲ್ಯವಿವಾಹ, ಸತಿನಿಷೇಧ, ವರದಕ್ಷಿಣೆ, ಕೌಟುಂಬಿಕ ಹಿಂಸೆ ಈ

ಕಾಯ್ದೆಯ ಬಗ್ಗೆ ತಿಳಿದಿದ್ದರೂ ಸಹ ಇನ್ನು ಯಾಕೆ ಅವರ ಜೀವನದ ರೀತಿ ನೀತಿ ಬದಲಾವಣೆ ಹೊಂದಲು ಸಾಧ್ಯವಾಗುತ್ತಿಲ್ಲ ಎನ್ನುವ ಕಾರಣ ಕಂಡುಕೊಳ್ಳುವುದು ಈ ಅಧ್ಯಯನದ ಮಹತ್ವವಾಗಿದೆ.

ಶತಶತಮಾನದ ಆದಿಯಿಂದಲೂ ಮತ್ತು ಇಂದಿನ ಆಧುನಿಕ ಯುಗದಲ್ಲಿಯೂ ಸಹ ಮಹಿಳೆಯರು ಅನೇಕ ಶೋಷಣೆಗಳಿಗೆ ಬಲಿಯಾಗುತ್ತಲೇ ಇದ್ದಾರೆ. ಅವರು ಇವೆಲ್ಲವುದರಗಳ ವಿರುದ್ಧ ತಲೆ ಎತ್ತಲು ಆಗದೇ ಅಸಹಾಯಕರಾಗಿದ್ದಾರೆ. ಸ್ತ್ರೀ-ಪುರುಷರು ಸಮಾನರು ಎಂಬ ಮಾತು ಕೇವಲ ಕಾಯ್ದೆಯಲ್ಲಿ ಮಾತ್ರವಿದೆ, ಆದರೆ ವಾಸ್ತವತೆ ಬೇರೆಯಾಗಿ ಇದ್ದುದ್ದು ಕಂಡುಬರುತ್ತದೆ. ಶತಮಾನದ ಆದಿಯಿಂದ ಅತ್ಯಂತದವರೆಗೆ ನಮ್ಮ ದೇಶದಲ್ಲಿ ಹೆಣ್ಣಿನ ಸ್ಥಾನವನ್ನು ಎತ್ತರಿಸುವ ನಿಟ್ಟಿನಲ್ಲಿ ಗಮನಾರ್ಹ ಪ್ರಯತ್ನಗಳು ನಡೆದಿದ್ದರೂ ಈ ಪ್ರಯತ್ನಗಳು ಸಾಕಷ್ಟು ಫಲವನ್ನು ನೀಡಿದರೂ ನಿರೀಕ್ಷಿಸಿದಷ್ಟು ಸಾಫಲ್ಯ ಪಡೆಯಲು ಅಸಮರ್ಥವಾಗಿದೆ.

ಶತಮಾನಗಳಿಂದ ನಿರ್ಲಕ್ಷ್ಯತೆ ಮತ್ತು ವಿವಾಹದಿಂದ ತಮ್ಮ ಬದುಕಿಗೆ ಭದ್ರತೆ ದೊರೆಯುತ್ತದೆ ಎಂಬ ನಂಬಿಕೆಯೇ ದಬ್ಬಾಳಿಕೆಯ ಚಕ್ರವ್ಯೂಹಕ್ಕೆ ಸಿಲುಕಿ ನಲುಗಿರುವ ಹೆಣ್ಣಿಗೆ ಅದರಿಂದ ಹೊರಬರಲು ಸಾಧ್ಯ ಹಾಗೂ ಸಬಲಳಾಗಿ ದೃಢವಾಗಿ ದಾಪುಗಾಲು ಹಾಕಲು ಇದನ್ನೇ ಸಾಕಾರಗೊಳ್ಳಿಸುವುದು ನಮ್ಮ ನಿಮ್ಮೆಲ್ಲರ . ಕರ್ತವ್ಯವಾಗಿದೆ ಎಂಬುದು ಅಧ್ಯಯನದ ಮಹತ್ವವಾಗಿದೆ.

ವಿವಾಹದ ಪ್ರಾಚೀನತೆಯ ಬಗ್ಗೆ ನಿಖರವಾಗಿ ಹೇಳಲು ಸಾಧ್ಯವಿಲ್ಲ. ಮದುವೆಯ ಕಲ್ಪನೆಯಾಗಲಿ, ವ್ಯವಸ್ಥೆಯಾಗಲಿ, ಇರದ ಜನಸಮೂಹವೇ ಬಹುಶಃ ಈ ಹೊತ್ತು ಪ್ರಪಂಚದಲ್ಲಿ ಇರಲಾರದು. ಮನುಷ್ಯ ಭೂಮಿಯಲ್ಲಿ ಕಾಣಿಸಿಕೊಳ್ಳುವ ಮೊದಲೇ ಕೆಲವು ವಾನರ ವರ್ಗಗಳಲ್ಲಿ, ಅದಕ್ಕೂ ಮೊದಲು ಕೆಲವು ಪ್ರಾಣಿಗಳಲ್ಲಿ ಮತ್ತು ಪಕ್ಷಿಗಳಲ್ಲಿ ಇಂತಹ ಒಂದು ವ್ಯವಸ್ಥೆಯನ್ನು ಗುರುತಿಸುವುದು ಸಾಧ್ಯವೆಂದು ಸಮಾಜಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

ಒಂದು ಗಂಡು ಪ್ರಾಣಿಯೇ, ಪಕ್ಷಿಯೇ ಯಾವುದಾದರೊಂದು ಅವಧಿಯಲ್ಲಿ ಹೆಣ್ಣಿನೊಂದಿಗೆ ಕೂಡಿಕೊಳ್ಳುವುದು, ಕೂಡಿಕೊಂಡ ಮೇಲೆ ಜನಿಸಿದ ಮರಿಗಳ ಜವಾಬ್ದಾರಿಯನ್ನು ಒಟ್ಟಿಗೆ ನಿಭಾಯಿಸುವುದು, ಗಂಡು ಮತ್ತು ಹೆಣ್ಣು ತಮ್ಮ ಮರಿಗಳೊಂದಿಗೆ ಒಟ್ಟು ಸೇರಿ ಒಂದು ಕುಟಂಬದಂತೆ ಜೀವನ ಸಾಗಿಸುವುದು ಇದು ಪ್ರಕೃತಿಯ ಸಹಜವಾದ ಸಂತಾನೋತ್ಪತ್ತಿಗಾಗಿ ನಡೆಯುವ ಪ್ರಕ್ರಿಯೆಯಷ್ಟೆ. ಆದುದರಿಂದ ಇದು ಮಾನವ ಸಮಾಜಕ್ಕೆ ಮಾತ್ರ ಸೀಮಿತವಾದುದೆಂದು ಹೇಳಲಾಗುವುದಿಲ್ಲ. ಹೀಗೆ ಒಟ್ಟಿಗೆ ಕೂಡುವ, ಅನಂತರ ಕೂಡಿ ಬಾಳುವ, ಕಲ್ಪನೆ ಮನುಷ್ಯನಿಗಿಂತ ಹಳೆಯದು. ಆದರೆ ಮನುಷ್ಯನಲ್ಲಿ ದೇಶ, ಕಾಲ ಪರಿಸ್ಥಿತಿಗಳಿಗನುಗುಣವಾಗಿ ಬೆಳೆದು ಬಂದ ಒಂದು ಅಚ್ಚುಕಟ್ಟಾದ ವ್ಯವಸ್ಥೆಯಿದೆಯೆಂದು ಹೇಳಬಹುದು.

ಹೀಗೆ ಕುಟುಂಬಕ್ಕೆ ಒಂದು ಸ್ಪಷ್ಟ ಚೌಕಟ್ಟು, ಸಮಾಜದಿಂದ ಅಂಗೀಕೃತವಾದ ಗೌರವಾನ್ವಿತ ಚೌಕಟ್ಟು ಸಿದ್ಧವಾದ ಮೇಲೆ ಕುಟುಂಬದೊಳಗೆ ಸೇರುವುದು ಮತ್ತು ಕುಟುಂಬದಿಂದ ಹೊರ ಬರುವುದು ಎರಡೂ ಕೆಲವೊಂದು ನೀತಿ-ನಿರ್ಬಂಧನೆಗಳಿಗೆ ಒಳಪಡಬೇಕಾಯಿತು. ಹೀಗೆ ಕುಟುಂಬದೊಳಗೆ ಸೇರಿಕೊಂಡ ವ್ಯಕ್ತಿಯ ಹಕ್ಕು-ಬಾಧ್ಯತೆಗಳಿಗೆ ಅರ್ಹನಾಗಬೇಕಾಯಿತು. ಇಂತಹ ಕುಟುಂಬದ ನಿರ್ಮಾಣ ಮದುವೆ ಮೂಲಕವೇ ಎಂಬ ಕಟ್ಟುಪಾಡು ಸಮಾಜದ ಅಚ್ಚುಕಟ್ಟಾದ ವ್ಯವಸ್ಥೆಗೆ, ಉನ್ನತಿಗೆ ಮತ್ತು ಸಾಮರಸ್ಯದ ಜೀವನಕ್ಕೆ ಅಗತ್ಯವೆನಿಸಿತು. ಕುಟುಂಬವನ್ನು ತೊರೆಯುವ ಅಥವಾ ಕುಟುಂಬದಿಂದ ಹೊರಬರುವ ಅಹಿತಕರ ಸಂದರ್ಭಗಳಲ್ಲಿ ವಿವಾಹವಿಚ್ಛೇದನದಂತಹ ಕೆಲವೊಂದು ನಿಯಮಗಳೂ ಅನಿವಾರ್ಯವಾದವು. ಹೀಗೆ ಇಡೀ ಜನಾಂಗ ನಿರ್ದಿಷ್ಟವಾದ ಹೆಣ್ಣು-ಗಂಡುಗಳ ಜೋಡಿಯನ್ನು ಗುರುತಿಸಬೇಕಾದರೆ, ಮಾನ್ಯಮಾಡಬೇಕಾದರೆ ವಿವಾಹವೇ ದಾರಿಯೆಂಬ ಪರಂಪರೆ ಪ್ರಚಲಿತವಾಗಿ ಪ್ರತಿಷ್ಠಿತವಾಯಿತು. ಸಾಮಾಜಿಕ ಮನ್ನಣೆ ಪಡೆದ ಗಂಡು-ಹೆಣ್ಣುಗಳ ಸಂಯೋಗವನ್ನು ವಿವಾಹ ಎನ್ನುತ್ತಾರೆ. ವಿವಾಹದ

ಮೂಲಕ ಗಂಡು-ಹೆಣ್ಣುಗಳು ಪತಿ-ಪತ್ನಿಯರಾಗಿ ಕುಟುಂಬವನ್ನು ಸ್ಥಾಪಿಸುವರು. ಈ ರೀತಿಯಲ್ಲಿ ವಿವಾಹ ಪದ್ಧತಿಯು ಕುಟುಂಬ ಸಂಸ್ಥೆಗೆ ತಳಹದಿಯಾಗುತ್ತದೆ.

ವ್ಯಕ್ತಿಗಳ ದೃಷ್ಟಿಯಿಂದ ವಿವಾಹ ಅತ್ಯಗತ್ಯದ ವಿಧಿಯೆಂದು ತೋರದಿರಬಹುದಾದರೂ ಸಾಮಾಜಿಕ ದೃಷ್ಟಿಯಿಂದ ಅದರ ಅಗತ್ಯ, ಮಹತ್ವ ಹೆಚ್ಚು, ಜಗತ್ತಿನ ಎಲ್ಲಾ ಸಸಮಾಜಗಳಲ್ಲೂ ವಿವಾಹವು ಧಾರ್ಮಿಕ ವಿಧಿ-ವಿಧಾನಗಳೊಂದಿಗೆ ಸಾಮಾಜಿಕವಾಗಿ ಆಚರಿಸಲ್ಪಡುವ ಕಾರ್ಯವಾಗಿ ತನ್ನ ಸ್ಥಾನವನ್ನು ಸಾಂಸ್ಥಿಕವಾಗಿ ಸ್ಥಿರಪಡಿಸಿಕೊಂಡಿದೆ. ಮಾನವನು ಅಲೆಮಾರಿಯಾಗಿ ಬೇಟೆಯಾಡುತ್ತ, ಗೆಡ್ಡೆಗೆಣಸುಗಳನ್ನು ಮತ್ತು ಹಣ್ಣು ಹಂಪಲುಗಳನ್ನು ತಿನ್ನುತ್ತ, ಜೀವಿಸುತ್ತಿದ್ದ ಕಾಲದಲ್ಲೂ ಕಾಮತೃಪ್ತಿ ಮತ್ತು ಸಂತಾನಾಪೇಕ್ಷೆಗಳು ಅವನನ್ನು ಸಹ ಜೀವನಕ್ಕೆ ಅನಿವಾರ್ಯವಾಗಿ ಪ್ರೇರೇಪಿಸಿರಬಹುದು ಎಂಬೊಂದು ಕಲ್ಪನೆಯಿದೆ. ಕಾಲಾಂತರದಲ್ಲಿ ಸಭ್ಯತೆಯ ವಿಕಾಸದೊಂದಿಗೆ ಪಶುಪಾಲನೆ, ಕೃಷಿಗಳಿಂದಾಗಿ ಕೆಲಕಾಲವಾದರೂ ಅವನು ಒಂದೆಡೆ ಸ್ಥಿರವಾಗಿ ವಾಸಿಸಬೇಕಾಗಿ ಬಂದಾಗ, ಸುಖ-ದುಃಖಗಳನ್ನು ಪರಸ್ಪರರು ಹಂಚಿಕೊಳ್ಳಲು ಅದು ಸಹಕಾರಿಯಾಗುತ್ತ ದೆಂಬುದು ಅನುಭವದಿಂದ ಅವನಿಗೆ ಮನವರಿಯಾದಾಗ ಸಹ ಜೀವನದ ಪದ್ಧತಿಯು ಮಾನವನ ಜೀವನದಲ್ಲಿ ಬಲವಾಗಿ ಬೇರೂರಿ ಮುಂದೆ 'ಕುಟುಂಬ' ಎಂಬ ಸಂಸ್ಥೆಗೆ ನಾಂದಿಯಾಯಿತ್ತೆಂದು ಊಹೆಯಿದೆ.

'ಆದಿ ಮಾನವ ಬೇಟೆ ಮಾಡುತ್ತಿದ್ದ ಕಾಲದಲ್ಲಿ ಉದರ ಪೋಷಣೆ ಮತ್ತು ಮಕ್ಕಳು ಮರಿಗಳ ಪಾಲನಾ ದೃಷ್ಟಿಯಿಂದ ಸ್ಥಿರವಾಗಿ ನಿಂತ ಹೆಣ್ಣು, ಗುದ್ದಲಿ ಹಿಡಿದಿರಬೇಕು. ಈ ದೃಷ್ಟಿಯಿಂದ ಅವಳೇ ವ್ಯವಸಾಯ ಸ್ಥಿತಿಗೆ ನಾಂದಿ ಮಾಡಿದವಳು. ನಿಸರ್ಗ ಸಹಜ ಮಾತೃ ಪ್ರಧಾನ ವ್ಯವಸ್ಥೆಗೂ ಕಾರಣಳಾದಳು. ಅವಳು ಆದಿಶಕ್ತಿ, ಆದಿಮಾತೆ ಎಂಬ ನಂಬಿಕೆ ಮೂಡಲು ಅಲ್ಲಿಂದ ನಾಗರೀಕ ಜೀವನದವರೆಗೂ ಎಳೆಯಾಗಿ ಜೀವನವನ್ನು ರೂಪಿಸಿಕೊಂಡ ರೀತಿ ಆಶ್ಚರ್ಯವನ್ನುಂಟು ಮಾಡುತ್ತದೆ'.[೧]

ವಿವಾಹವೊಂದು ಅನಿವಾರ್ಯ ಸಾಮಾಜಿಕ ಸಂಸ್ಥೆಯಾಗಿ ಹುಟ್ಟಿಕೊಂಡರೂ ನಂತರದ ದಿನಗಳಲ್ಲಿ ವಿವಾಹ ಸಂಸ್ಥೆ ಧಾರ್ಮಿಕ ಆಚರಣೆಯೆನ್ನುವಂತೆ ಭಾವಿತವಾಯಿತು. ಇಂದು ಬಹುತೇಕ ಸಮಾಜಗಳಲ್ಲಿ ವಿವಾಹವು ಒಂದು ಧಾರ್ಮಿಕ ಸಂಸ್ಕಾರವಾಗಿದೆ. ಇದೊಂದು ಮಾಂಸದೊಂದಿಗೆ ಮಾಂಸವನ್ನು, ಎಲುಬಿನೊಂದಿಗೆ ಎಲುಬನ್ನು ಕೂಡಿಸುವ ಅವಿಚ್ಛಿನ್ನವಾದ ಸಂಯೋಗವಾಗಿದೆ. ಪತ್ನಿಯೊಬ್ಬಳನ್ನು ಸ್ವೀಕರಿಸುವ ತನಕ ಒಬ್ಬನಿಗೆ ಜಾಗತಿಕ ಅಸ್ತಿತ್ವವಿದೆಯೆಂದು ಹೇಳುವಂತಿಲ್ಲ. ಒಬ್ಬ ಪುರುಷನು ವಿವಾಹಿತನಾಗುವ ತನಕ ಅಪೂರ್ಣನು, ಪತ್ನಿಯನ್ನು ಪಡೆದ ಬಳಿಕವೇ ಅವನು ಪೂರ್ಣತ್ವವನ್ನು ಪಡೆಯುವನು. ಹಿಂದೂ ಕಾನೂನಿನ ಪ್ರಕಾರ ವಿವಾಹದ ಧ್ಯೇಯವು ಮಹೋನ್ನತವಾದುದು. ಸತ್ಕಾರ್ಯಗಳನ್ನು ಮಾಡಿ ಮೋಕ್ಷ ಪಡೆಯುವುದೇ ವಿವಾಹದ ಉದ್ದೇಶವೆಂದು ಅಪಸ್ತಂಭನು ಹೇಳಿರುವನು. ಧಾರ್ಮಿಕ

ಕಾರ್ಯಕಲಾಪಗಳು ಮತ್ತು ಪುತ್ರ ಪ್ರಾಪ್ತಿಯೊಂದಿಗೆ ವಿವಾಹವು ಸಂಬಂಧವನ್ನಿಟ್ಟುಕೊಂಡಿದೆ. ವಿವಾಹವು ಒಂದು ಕರಾರರಲ್ಲ ಇದೊಂದು ಅವಿಚ್ಛಿನ್ನವಾದ ಬಂಧನ.

## ವಿವಾಹದ ಸ್ವರೂಪ

ವಿವಾಹವು ಕನ್ಯೆಯ ಮೇಲಿರುವ ತಂದೆಯ ಅಧಿಕಾರವನ್ನು ಗಂಡನಿಗೆ ಹಸ್ತಾಂತರಿಸುತ್ತದೆ. ಇದು ಪ್ರತಿಯೊಂದು ನಾಗರಿಕ ಸಮಾಜದಲ್ಲಿ ಶಾಂತಿ ಮತ್ತು ವ್ಯವಸ್ಥೆಯ ಆಧಾರವಾಗಿದೆ. ಹಿಂದೂಗಳಲ್ಲಿ ಇದಕ್ಕೊಂದು ಧಾರ್ಮಿಕ ಸ್ವರೂಪವನ್ನು ಕೊಡಲಾಗಿದೆ. ವಿವಾಹ ಪದ್ಧತಿಯು ಹಿಂದುಗಳಲ್ಲಿ ವೇದಕಾಲದಿಂದಲೂ ಬಳಕೆಯಲ್ಲಿತ್ತು. ರಘುನಂದನನು ವಿವಾಹವನ್ನು ಈ ರೀತಿಯಾಗಿ ಪರಿಭಾಷಿಸಿರುವನು. "ವರನು ಒಬ್ಬ ಹುಡುಗಿಯನ್ನು ತನ್ನ ಪತ್ನಿಯೆಂದು ಸ್ವೀಕರಿಸುವುದು ಮತ್ತು ಹುಡುಗಿಯ ಪಾಲಕನಿಂದ ಅವಳನ್ನು ಕೊಡಲ್ಪಡುವುದು." ಈ ಸಂಬಂಧ ಅಲಹಾಬಾದ್ ಉಚ್ಚನ್ಯಾಯಾಲಯದ ಪರಿಭಾಷೆಯು ಗಮನಾರ್ಹವಾಗಿದೆ. "ಹಿಂದೂ ಕಾನೂನಿನ ಮೇರೆಗೆ ವೈವಾಹಿಕ ಪದ್ಧತಿಯು ಒಂದು ಧಾರ್ಮಿಕ ಕಾರ್ಯವಾಗಿದೆಯಲ್ಲದೇ ಅದು ಸಾಮಾಜಿಕ ಅಥವಾ ಕಾನೂನಿನ ಕರಾರಲ್ಲಿ ಇದನ್ನು ನೆರವೇರಿಸುವುದು ಕೇವಲ ಮಾನಸಿಕ ವ್ಯಕ್ತಿಗೋಸ್ಕರವಲ್ಲ ಹಾಗೂ ಇದೊಂದು ಕೇವಲ ನಿಶ್ಚಿತಾರ್ಥವಲ್ಲ. ಇದರ ಸಂದರ್ಭವು ಧಾರ್ಮಿಕವಾಗಿದೆ. ಇದನ್ನು ಆತ್ಮದ ಜೀವನದ ಭಾಗವೆಂದು ಎಣಿಸಲಾಗುತ್ತದೆ. ಇದೊಂದು ಧಾರ್ಮಿಕ ಸಂಯೋಗವಾಗಿದೆ. ಇದು ಪ್ರಾಚೀನ ರೋಮನ್ನರ ವಿವಾಹ ಪದ್ಧತಿಯನ್ನು ಹೋಲುತ್ತದೆ. ಈ ಪ್ರಕ್ರಿಯೆಯಿಂದಾಗಿ ಪತಿ-ಪತ್ನಿಯರಿಬ್ಬರೂ ಒಂದಾಗುವರು. ಪತ್ನಿಯು ಸಪ್ತಪದಿಯ ಏಳನೇ ಹೆಜ್ಜೆಯೊಂದಿಗೆ ತನ್ನ ಮೂಲಗೋತ್ರವನ್ನು ಕಳೆದುಕೊಂಡು ಗಂಡನ ಗೋತ್ರವನ್ನು ಪಡೆಯುವಳು ಮತ್ತು ಇದರೊಳಗೆ ಉಂಟಾದ ಸಂಬಂಧವು ಕೇವಲ ಸಂತೋಷಕ್ಕೋಸ್ಕರ ಮಾಡಲಾದ ಮಿತ್ರತ್ವವಲ್ಲ. ಬ್ರಹ್ಮ, ಪ್ರಜಾಪತ್ಯ, ಆರ್ಶ ಮತ್ತು ದೈವ ಇವುಗಳಲ್ಲಿ ಯಾವುದಾದರೊಂದು ರೀತಿಯಿಂದ ನೇರವೇರಿಸಲ್ಪಟ್ಟ ಒಂದು ವಿವಾಹವು ಅವಿಚ್ಛಿನ್ನವಾಗಿರುತ್ತದೆ." ಪ್ರಾಚೀನ ರೋಮನ್ನರ ವಿವಾಹಗಳಂತೆ ಇದು ಜೀವನದುದ್ದಕ್ಕೆ ಕೂಡಿ ಕೊಂಡಿರುವಂತದಾಗಿದ್ದು ಮಾನವೀಯ ಮತ್ತು ದೈವಿಕ ಹಕ್ಕು ಮತ್ತು ಕರ್ತವ್ಯಗಳಲ್ಲಿ ಪೂರ್ಣಭಾಗೀದಾರಿಕೆಯುಳ್ಳದ್ದಾಗಿರುತ್ತದೆ. ಪತ್ನಿಯು ಪ್ರಾಪಂಚಿಕ ವಿಷಯಗಳಲ್ಲಿ ಪತಿಯ ಕೇವಲ ಸಹಾಯಕಳಲ್ಲ. ಅವಳು ಧಾರ್ಮಿಕ ಕರ್ತವ್ಯಗಳಲ್ಲಿ ಮತ್ತು ನಿರಂತರ ಯಜ್ಞಗಳಲ್ಲಿ ಅವನೊಂದಿಗೆ ಸಹಕರಿಸಿ ಮೋಕ್ಷ ಪಡೆಯಲು ಸಹಾಯಕಳಾಗುವಳು. ಆದುದರಿಂದ ಒಬ್ಬ ಕಾನೂನುಬದ್ಧ ಪತ್ನಿಯನ್ನು ಧರ್ಮಪತ್ನಿಯೆನ್ನುವರು. ಅಂದರೆ ಧರ್ಮಕಾರ್ಯಗಳನ್ನು ಪೂರ್ಣಗೊಳಿಸುವುದಕ್ಕಾಗಿ ಎರಿಸಲ್ಪಟ್ಟಿರುವ ಪತ್ನಿ. ಒಬ್ಬ ಹಿಂದೂ ಸ್ತ್ರೀಯ ಜೀವನದಲ್ಲಿ ವಿವಾಹವು ಅತ್ಯಂತ ಮಹತ್ವದ ಸಂಸ್ಕಾರವಾಗಿರುತ್ತದೆ. ಹಿಂದೂ ಸ್ತ್ರಿಗೆ ಇತರ ಯಾವುದೇ ರೀತಿಯ ಸಂಸ್ಕಾರವಿಲ್ಲ. ಆದುದರಿಂದ ಈ ಸಂಸ್ಕಾರವು ಆಕೆಗೆ

ಅನಿವಾರ್ಯವಾದುದು. ವಿವಾಹವು ಮತ್ತು ಸಂಸ್ಕಾರಗಳಲ್ಲಿ ಕೊನೆಯ ಸಂಸ್ಕಾರವಾಗಿದ್ದು ಇದು ಶರೀರವನ್ನು ಅನುವಂಶಿಕ ಕಳಂಕದಿಂದ ಶುದ್ಧಗೊಳಿಸುವುದೆಂದು ಬೊಂಬಾಯಿ ಮತ್ತು ಮದ್ರಾಸ್ ಉಚ್ಚನ್ಯಾಯಾಲಯಗಳು ಹೇಳಿವೆ. ವಿವಾಹವು ಇಡೀ ಜೀವಮಾನಕ್ಕೆ ಬಾಧ್ಯವಾಗಿದೆ. ಹೋಮದ ಅಗ್ನಿಯ ಮುಂದೆ ಮಾಡಲಾದ ಸಪ್ತಪದಿಯ ಒಂದು ಧಾರ್ಮಿಕ ಸಂಬಂಧವನ್ನು ನಿರ್ಮಿಸುವುದಿಲ್ಲ ಎಂದು ಮದ್ರಾಸ್ ಉಚ್ಚ ನ್ಯಾಯಾಲಯವು ಒಂದು ನಿರ್ಣಯದಲ್ಲಿ ಹೇಳಿರುತ್ತದೆ. ವಿವಾಹವು ಸಮ್ಮತಿಯ ಮೇಲೆ ನಿರ್ಮಿತವಾದ ಒಂದು ಕರಾರಲ್ಲ.

**ವಿವಾಹದ ಆದರ್ಶ ಭಾವ ಸ್ವರೂಪ :** ವೇದಕಾಲದಲ್ಲೂ ಸಹ ವಿವಾಹಕ್ಕೆ ತುಂಬಾ ಮಹತ್ವ ಕೊಡಲಾಗುತ್ತಿತ್ತು. ವಿವಾಹದ ತಕ್ಷಣ ಪತ್ನಿಗೆ ಗೌರವ ಸ್ಥಾನ ಕೊಡಲಾಗುತ್ತಿತ್ತು. ಆಕೆಯು ತನ್ನ ಗಂಡನ ಸಹೋದರರ ಮತ್ತು ಅವಿವಾಹಿತ ಸಹೋದರಿಯ ಮೇಲೆ ಅಧಿಕಾರ ನಡೆಸುತ್ತಿದ್ದಳು. ಎಲ್ಲಾ ಧಾರ್ಮಿಕ ಕಾರ್ಯಗಳಲ್ಲಿ ಆಕೆಯು ಗಂಡನೊಡನೆ ಇರುತ್ತಿದ್ದಳು. ಕೆಲವು ಲೇಖಕರ ಅಭಿಪ್ರಾಯದಲ್ಲಿ ಆಕೆಯು ಗಂಡನ ಅರ್ಧವಾಗಿದ್ದುದರಿಂದ ಆಕೆಯಿಂದಲೇ ಗಂಡಸು ಪೂರ್ಣತ್ವವನ್ನು ಪಡೆಯುವನು. "ತಮ್ಮ ಸ್ವಂತ ಸುಖವನ್ನು ಬಯಸುವ ತಂದೆಯಂದಿರು, ಸಹೋದರರು ಗಂಡಂದಿರು ಮತ್ತು ಭಾವಂದಿರು ಸ್ತ್ರೀಯರನ್ನು ಗೌರವಿಸಬೇಕು ಮತ್ತು ಅಲಂಕರಿಸಬೇಕು. ಎಲ್ಲಿ ಸ್ತ್ರೀಯರು ಗೌರವಿಸಲ್ಪಡುವರೂ ಅಲ್ಲಿ ದೇವತೆಗಳು ಸಂತೃಪ್ತರಾಗುವರು. ಆದರೆ ಎಲ್ಲಿ ಗೌರವಿಸಲ್ಪಡುವುದಿಲ್ಲವೊ ಅಲ್ಲಿ ಯಾವ ಧಾರ್ಮಿಕ ಕಾರ್ಯವೂ ಫಲಪ್ರದವಾಗದು" ಎಂದು ಮನುವು ಹೇಳಿರುವನು. ಗಂಡಹೆಂಡಿರೊಳಗೆ ಉಂಟಾದ ವಿವಾಹದ ಬಗ್ಗೆ ಪರಂಪರಾಗತ ನ್ಯಾಯಾಧೀಕರಣಗಳಲ್ಲಾಗಲಿ ಅಥವಾ ರಾಜನ ನ್ಯಾಯಾಲಯದಲ್ಲಾಗಲಿ ವ್ಯವಹಾರ ಮಾಡುವುದನ್ನು ನಿಷೇಧಿಸಲಾಗಿತ್ತು.

**ವಿವಾಹದ ಪರಿಭಾಷೆ :** ವರನು ವಧುವನ್ನು ತನ್ನ ಪತ್ನಿಯನ್ನಾಗಿ ಸ್ವೀಕರಿಸುವುದು ವಿವಾಹವೆಂದು ರಘುನಂದನನು ಹೇಳಿರುವನು. ಒಂದು ರೀತಿಯಿಂದ ನೋಡಿದರೆ ವಿವಾಹದ ವ್ಯವಹಾರದ್ದೇ ಆಕೆಯ ಒಂದು ಪಕ್ಷವಲ್ಲ; ಆಕೆಯ ವರ ಮತ್ತು ಆಕೆಯ ರಕ್ಷಕನ ನಡುವೆ ನಡೆಯುವ ವ್ಯವಹಾರದಲ್ಲಿ ದಾನದ ವಿಷಯ ವಸ್ತುವಾಗಿರುವಳು. ವಧುವಿನ ವಿವಾಹ ಎಂಬುದು ಅರ್ಥಹೀನ. ಹಿಂದೂ ಕಾನೂನಿನ ಪ್ರಕಾರ ವಧುವು ಪೂರ್ಣವಾಗಿ ಆಕೆಯ ತಂದೆ ತಾಯಿ ಅಥವಾ ಸಂರಕ್ಷಕನ ಅಧೀನದಲ್ಲಿರುವಳು. ಅವಳ ವಿವಾಹದ ಕರಾರನ್ನು ಅವಳ ಸಮ್ಮತಿ ಅಥವಾ ಅಸಮ್ಮತಿಯನ್ನು ಗಮನಕ್ಕೆ ತೆಗೆದುಕೊಳ್ಳಲಾಗುವುದಿಲ್ಲ. ಆದರೆ ಹಿಂದೂ ವಿವಾಹವು ಒಂದು ಚರಸ್ಪತ್ತಿಗೆ ಸಮಾನಳಲ್ಲ. ಯೋಗ್ಯ ವ್ಯಕ್ತಿಗೆ ಮಗಳನ್ನು ಕೊಡುವುದು ತಂದೆಯ ಪವಿತ್ರ ಕರ್ತವ್ಯವಾಗಿದ್ದು ಈ ಕೃತ್ಯವನ್ನು ಮಾಡಿದ ಬಳಿಕ ತಂದೆಗೆ ಪುಣ್ಯವು ಪ್ರಾಪ್ತವಾಗುತ್ತದೆ. ಅಪಸ್ತಂಭನ ಅಭಿಪ್ರಾಯದಲ್ಲಿ 'ಪಾಣಿಗ್ರಹಣ'ದಿಂದ ಗಂಡು ಮತ್ತು ಹೆಣ್ಣನ್ನು ಒಂದುಗೂಡಿಸಿ ಪುಣ್ಯ

ಪ್ರಾಪ್ತಿ ಮಾಡಲು ಅನುವಾಗುತ್ತದೆ. ಆದುದರಿಂದ ವಿವಾಹವು ಸಾಮಾಜಿಕ ಮತ್ತು ಧಾರ್ಮಿಕ ಸಂಘಟನೆಯ ಆಧಾರವಾಗಿದ್ದು ಇಲ್ಲಿಂದಲೇ ಕಾನೂನಿನ ಹಕ್ಕು ಬಾಧ್ಯತೆಗಳು ಉತ್ಪನ್ನವಾಗುತ್ತವೆ.

ಹಿಂದಿನ ಕಾಲದಲ್ಲಿ ಎಂಟು ರೀತಿಯ ವಿವಾಹಗಳು ಬಳಕೆಯಲ್ಲಿದ್ದವು. ಅವುಗಳಲ್ಲಿ ನಾಲ್ಕು ರೀತಿಯವುಗಳು ಸಮ್ಮತಿಸಲ್ಪಟ್ಟಿರಲಿಲ್ಲ. ಸಮ್ಮತ ಮತ್ತು ಅಸಮ್ಮತ ವಿವಾಹಗಳೂ ಕಾನೂನುಗಳು ಬೇರೆ ಬೇರೆಯಾಗಿದ್ದವು ಮತ್ತು ಬ್ರಹ್ಮ, ದೈವ, ಆರ್ಶ, ಪೂಜಾಪಾತ್ಯ ಇವು ಸಮ್ಮತ ವಿವಾಹಗಳಾಗಿದ್ದವು. ಅಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಇವು ಅಸಮ್ಮತ ವಿವಾಹಗಳಾಗಿದ್ದವು.

೧. ಬ್ರಹ್ಮ ವಿವಾಹ : ಕನ್ಯೆಯನ್ನು ವಸ್ತ್ರ, ಬೆಳ್ಳಿ, ಬಂಗಾರ, ರತ್ನಾದಿ ಆಭರಣಗಳಿಂದ ಯೋಗ್ಯತಾನುಸಾರಸವಾಗಿ ಅಲಂಕರಿಸಿ ವಿದ್ಯಾ, ಶೀಲಾದಿ ಗುಣವರತ ವರನಿಗೆ, ಅವನು ಬೇಡದೇ ವಧುವಿನ ತಂದೆಯು ದಾನ ಮಾಡುವ ವಿವಾಹ ಪದ್ಧತಿಯನ್ನು ಬ್ರಹ್ಮವಿವಾಹ ಎನ್ನುತ್ತೇವೆ. ಇದು ನಿಜವಾದ ಅರ್ಥದಲ್ಲಿ ಕನ್ಯಾದಾನ ಎನಿಸುವುದು. ಇದು ಅತ್ಯಂತ ಯೋಗ್ಯ ಹಾಗೂ ಉತ್ತಮವಾದ ವಿವಾಹ ಪದ್ಧತಿಯಾಗಿರುವುದು. ವಿವಾಹದ ಈ ಬಗೆಯಲ್ಲಿ ಯಾವುದೇ ತರಹದ ಒತ್ತಾಯ, ಬಲಾತ್ಕಾರ, ಹಿಂಸೆಗಳಿಲ್ಲದಿದ್ದು ಧಾರ್ಮಿಕ ಸಂಸ್ಕಾರವೆನಿಸಲು ಅರ್ಹವಾಗಿದೆ.

೨. ದೈವ ವಿವಾಹ : ಅಲಂಕೃತಳಾದ ಕನ್ಯೆಯನ್ನು ತಂದೆಯು ಯಜ್ಞದಲ್ಲಿ ಭಾಗವಹಿಸಿದ ಋತ್ವಿಜನಿಗೆ ದಾನವಾಗಿ ನೀಡಿ ಅನಂತರ ವಿವಾಹ ವಿಧಿಗಳನ್ನು ನೆರವೇರಿಸಲು ಪದ್ಧತಿಯನ್ನು ದೈವವಿವಾಹ ಎನ್ನುತ್ತೇವೆ. ಇಲ್ಲಿ ಯಜ್ಞದ ಸಫಲತೆಗಾಗಿ ಪುರೋಹಿತರಿಗೆ ದಕ್ಷಿಣೆ ಕೊಡುವುದರ ಬದಲು ಪ್ರಾಪ್ತ ವಯಸ್ಕಳಾದ ತಮ್ಮ ಮಗಳನ್ನೇ ದಾನವಾಗಿ ನೀಡಲಾಗುವುದು. ವಿವಾಹದ ಈ ಪ್ರಕಾರಗಳಲ್ಲಿ ತಂದೆಯು ತನ್ನ ಸ್ವಾರ್ಥತ್ಯಾಗಿ ಮಗಳನ್ನು ದಾನಮಾಡುವುದರಿಂದ ಇದು ಬ್ರಹ್ಮವಿವಾಹ ಪದ್ಧತಿಯಷ್ಟು ಶ್ರೇಷ್ಠವಾಗುವುದಿಲ್ಲ.

೩. ಅರ್ಷ ವಿವಾಹ : ವಧುವಿನ ತಂದೆಯು ತನ್ನ ಧಾರ್ಮಿಕ ಕಾರ್ಯಕ್ಕಾಗಿ ವರನಿಂದ ಒಂದು ಎತ್ತನ್ನಾಗಲಿ, ಒಂದು ಗೋವನ್ನಾಗಲಿ ಅಥವಾ ಎರಡನ್ನೂ(ಜೋಡಿ) ತೆಗೆದುಕೊಂಡು ಕನ್ಯಾದಾನ ಮಾಡುವ ವಿವಾಹ ಪದ್ಧತಿಯನ್ನು ಅರ್ಷವಿವಾಹ ಎನ್ನುತ್ತೇವೆ. ಹೀಗೆ ವರನಿಂದ ಎತ್ತು ಇಲ್ಲವೆ ಹಸುವನ್ನು ಪಡೆದು ಮಗಳನ್ನು ವಿವಾಹ ಮಾಡಿಕೊಡುವುದನ್ನು ಕನ್ಯೆಯ ಮಾರಾಟವೆಂದು ಪರಿಗಣಿಸಲಾಗದು. ಗೃಹಸ್ಥಾಶ್ರಮದ ಪವಿತ್ರ ಕರ್ತವ್ಯಗಳನ್ನು ಪೂರೈಸಲು ಉತ್ಸುಕನಾಗಿದ್ದ ವರನಿಗೆ ತನ್ನ ಮಗಳನ್ನು ದಾನಮಾಡಿ ಉಪಕರಿಸಿದ್ದಕ್ಕಾಗಿ ಮಾವನಿಗೆ ನೀಡಿದ ಕೃತಜ್ಞಪೂರ್ವಕ ಕೊಡುಗೆ ಎಂದು ಭಾವಿಸುವುದು ಸೂಕ್ತವಾದುದು.

೪. ಪೂಜಾಪತ್ಯ ವಿವಾಹ : ಕನ್ಯಾಪಿತೃವು ವರನನ್ನು ಸತ್ಕರಿಸಿ ''ನೀವಿಬ್ಬರೂ ಸಹ ಜೀವನವನ್ನು ನಡೆಸಿ'' ಎಂದು ಮಂತ್ರಪಠಿಸಿ ಆಶೀರ್ವದಿಸಿ ಕನ್ಯಾದಾನ ಮಾಡುವ ವಿವಾಹ ಪದ್ಧತಿಯನ್ನು ಪ್ರಜಾಪತ್ಯ ವಿವಾಹ ಎನ್ನುತ್ತೇವೆ.

**೫. ಅಸುರ ವಿವಾಹ :** ಕನ್ನೆಗೆ, ಕನ್ಯಾಪಿತೃವಿಗೆ, ಕನ್ಯಾ ಬಂಧುಗಳಿಗೆ ಧನದಿಂದ ಸಂತೋಷಪಡಿಸಿ ಕನ್ಯೆಯನ್ನು ವಿವಾಹವಾಗುವ ಪದ್ಧತಿಗೆ ಅಸುರ ವಿವಾಹ ಎನ್ನುತ್ತೇವೆ. ತೆರಕಟ್ಟುವುದು ಈ ಪದ್ಧತಿಗೆ ಸಂಬಂಧಿಸಿದ ವಿಷಯವಾಗಿದೆ. ಅಂತೆಯೇ ಈ ಪದ್ಧತಿಗಲ್ಲಿ ಕನ್ಯಾಪಿತೃವು ಮಗಳನ್ನು ದಾನಮಾಡುವುದರ ಬದಲು ವರನು ವಧುವನ್ನು ಕೊಂಡುಕೊಂಡಂತೆ ಭಾವಿಸಲಾಗುವುದು.

**೬. ಗಾಂಧರ್ವ ವಿವಾಹ :** ವಧು ಮತ್ತು ವರರು ಪರಸ್ಪರ ಸ್ವ ಇಚ್ಛೆಯಿಂದ ಪ್ರೀತಿಸಿ ಒಪ್ಪಿ ಒಂದು ಒಪ್ಪಂದಕ್ಕೆ ಬಂದು ವಿವಾಹವಾಗುವ ಪದ್ಧತಿಗೆ ಗಾಂಧರ್ವ ವಿವಾಹ ಎನ್ನುತ್ತೇವೆ. ಈ ಬಗೆಯ ವಿವಾಹದಲ್ಲಿ ತಂದೆ-ತಾಯಿಯರ ಅನುಮತಿಯಾಗಲೀ, ಗುರುಹಿರಿಯರ ಆಶೀರ್ವಾದವಾಗಲೀ ಅಗತ್ಯವಾಗಿರುವುದಿಲ್ಲ. ವಧುವಿನ ತೆರವಾಗಲೀ ವರದಕ್ಷಿಣೆಯಾಗಲೀ, ಯಾವುದೇ ಬಗೆಯ ಧನಾದಿ ದಾನವಾಗಲೀ ಅವಶ್ಯಕವಾಗಿರುವುದಿಲ್ಲ.

ಹಿಂದೂಗಳ ಪುರಾಣ ಪುಣ್ಯಕಥೆಗಳಲ್ಲಿ, ಮಹಾಕಾವ್ಯಗಳಲ್ಲಿ ಗಾಂಧರ್ವ ವಿವಾಹದ ಉಲ್ಲೇಖವಿದೆ. ದುಶ್ಯಂತ-ಶಾಕುಂತಲೆ, ನಳ-ದಮಯಂತಿ, ಅರ್ಜುನ ಸುಭದ್ರೆಯರ ವಿವಾಹಗಳು ಗಾಂಧರ್ವ ವಿವಾಹಕ್ಕೆ ಅತ್ಯುತ್ಯ ಉದಾಹರಣೆಗಳಾಗಿವೆ. ಕ್ಷತ್ರಿಯರಲ್ಲಿ ಈ ಬಗೆಯ ವಿವಾಹವು ಹೆಚ್ಚು ಪ್ರಚಲಿತವಾಗಿದ್ದಿತು ಎಂಬುದಾಗಿ ತಿಳಿದುಬರುತ್ತದೆ. ಈ ಬಗೆಯ ವಿವಾಹವು ಗಂಧರ್ವರಲ್ಲಿ ಹೆಚ್ಚು ಆಚರಣೆಯಲ್ಲಿದ್ದುದರಿಂದ ಇದಕ್ಕೆ ಗಾಂಧರ್ವ ವಿವಾಹ ಎಂದು ಹೆಸರು ಬಂದಿರುವುದಾಗಿ ತೈತ್ತರೀಯ ಸಂಹಿತಿ(Taitariya samhta)ಯಲ್ಲಿ ತಿಳಿಸಲಾಗಿದೆ. ಹಿಂದೂ ಶಾಸ್ತ್ರಕಾರರು ಪ್ರಕಾರ ಗಾಂಧರ್ವ ವಿವಾಹವು ಮೊದಲಿನ ನಾಲ್ಕು ಬಗೆಯ ವಿವಾಹ ಪದ್ಧತಿಯು ಧಾರ್ಮಿಕ ಹಾಗೂ ನೈತಿಕ ಆಧಾರಗಳನ್ನನುಸರಿಸಿ ನಡೆಯುವುದಿಲ್ಲ.

**೭. ರಾಕ್ಷಸ ವಿವಾಹ :** ಕನ್ಯೆಗೆ ಇಷ್ಟವಿಲ್ಲದಿದ್ದರೂ, ಆಳುತ್ತಿದ್ದರೂ. ಮನೆಯ ಬಾಗಿಲನ್ನು ಒಡೆದು, ವಿರೋಧಿಸುವವರಿದ್ದರೆ ಹೊಡೆದು ಬಡಿದು ಕೊಂದು ಬಲಾತ್ಕಾರದಿಂದ ಕನ್ಯೆಯನ್ನು ಅಪಹರಿಸಿ ವಿವಾಹವಾಗುವ ಪದ್ಧತಿಗೆ ರಾಕ್ಷಸ ವಿವಾಹ ಎನ್ನುತ್ತಾರೆ. ವಷ್ಟರ ಅಭಿಪ್ರಾಯದಂತೆ ಈ ಬಗೆಯ ವಿವಾಹವು ಕ್ಷತ್ರಿಯರಿಗೆ ಯೋಗ್ಯವಾದುದಾಗಿದೆ. ಈ ರೀತಿ ಬಲಾತ್ಕಾರವಾಗಿ ಅಪಹರಿಸಿಕೊಂಡು ಹೋಗಿ ವಿವಾಹವಾದ ಕನ್ಯೆಗೆ ಕಾನೂನಿನ ಪ್ರಕಾರ ಸಮಾಜದಲ್ಲಿ ಸ್ಥಾನಮಾನಗಳನ್ನು ನೀಡಲಾಗುವುದು.

**೮. ಪೈಶಾಚ ವಿವಾಹ :** ಕನ್ಯೆಯು ನಿದ್ರೆ ಮಾಡುತ್ತಿರುವಾಗ, ಮಧ್ಯಮತ್ತಳಾಗಿರುವಾಗ, ಅಜಾಗರೂಕಳಾಗಿ ಒಂಟಿಯಾಗಿರುವಾಗ ಶೀಲಭಂಗ ಮಾಡಿ ಅರ್ಥಾತ್ ಅಕ್ರಮ ಸಂಭೋಗ ಮಾಡಿ ವಿವಾಹವಾಗುವ ಪದ್ಧತಿಗೆ ಪೈಚಾಚ್ ವಿವಾಹ ಎನ್ನುತ್ತೇವೆ. ಈ ಬಗೆಯ ವಿವಾಹವು ಮೋಸ, ವಂಚನೆ ಹಾಗೂ ಕ್ರೌರ್ಯಗಳನ್ನಾಧರಿಸಿದ ವಿವಾಹ ಪದ್ಧತಿಯಾಗಿದೆ. ಇದು ಮಾನಭಂಗವನ್ನು, ಅತ್ಯಾಚಾರವನ್ನು ಅನುಮೋದಿಸುತ್ತದೆ.

ವಿವಾಹದ ಮೇಲಿನ ಈ ಬಗೆಗಳು ಇಲ್ಲವೇ ರೂಪಗಳು ಬಹಳಮಟ್ಟಿಗೆ ಎಲ್ಲ ಸ್ಮೃತಿಗಳಲ್ಲಿಯೂ ಒಂದೇ ರೀತಿಯಲ್ಲಿ ವಿವರಿಸಲ್ಪಟ್ಟಿವೆ. ಮನುಸ್ಮೃತಿಯ ಪ್ರಕಾರ ಬ್ರಹ್ಮ, ದೈವ, ಆರ್ಷ, ಪ್ರಜಾಪತ್ಯ, ಗಾಂಧರ್ವ ಮತ್ತು ರಾಕ್ಷಸ ವಿವಾಹಗಳು ನ್ಯಾಸಮ್ಮತವಾದವುಗಳಾಗಿಯೂ, ಅಸುರ ಮತ್ತು ಪೈಶಾಚ ವಿವಾಹಗಳು ನ್ಯಾಯ ಸಮ್ಮತವಾಗದವುಗಳಾಗಿಯೂ ಇವೆ. ಮನುವಿನ ಅಭಿಪ್ರಾಯದಂತೆ ಅಸುರ ಮತ್ತು ಪೈಶಾಚ ವಿವಾಹ ಪದ್ಧತಿಗಳು ಆಚರಸಲು ಯೋಗವಾದವುಗಳಲ್ಲ. ಅಶ್ವಾಲಯ ಗೃಹಸೂತ್ರ(Asvalaya grityasutra)ದಲ್ಲಿ ಮೊದಲಿನ ನಾಲ್ಕು ಬಗೆಯ ವಿವಾಹ ಪದ್ಧತಿಗಳು ಅನುಕ್ರಮವಾಗಿ ೧೨, ೧೦, ೮ ಮತ್ತು ೭ ತಲೆಮಾರುಗಳ ಪೂರ್ವಜರನ್ನು ಪುನೀತರನ್ನಾಗಿ(purification) ಮಾಡುವುದಾಗಿ ಅಭಿಪ್ರಾಯಪಡಲಾಗಿದೆ. ಆದರೆ ಇತರ ನಾಲ್ಕು ಬಗೆಯ ವಿವಾಹ ಪದ್ಧತಿಗಳಲ್ಲಿ ಆ ಬಗೆಯ ವಿವಾಹ ಪದ್ಧತಿಗಳು ಕನ್ಯೆಯು ಕನ್ಯಾಪಿತೃ ಹಾಗೂ ಬಂಧು ಬಳಗದವರ ಒಪ್ಪಿಗೆಯನ್ನಾಧರಿಸಿ ವರನಿಗೆ ಆಶೀರ್ವಾದ ಪೂರ್ವಕವಾಗಿ ಕನ್ಯಾದಾನವಾಗಲ್ಪಡುವುದರಿಂದ ಇವು ಉತ್ತಮ ರೀತಿಯ ವಿವಾಹ ಪದ್ಧತಿಗಳಾಗಿ ಪರಿಗಣಿಸಲ್ಪಟ್ಟಿವೆ. ಹಿಂದೂ ವಿವಾಹದಲ್ಲಿ ಕನ್ಯೆಯ ಕನ್ಯತ್ವಕ್ಕೆ ಹಾಗೂ ಬ್ರಹ್ಮ ಚಾರಿಯ ಬ್ರಹ್ಮಚರ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡಲಾಗಿರುವುದು ಮಹತ್ವದ ಸಂಗತಿಯಾಗಿರುವುದು.

**ವಿವಾಹದ ಬಂಧನ :** ಹಿಂದೂ ವಿವಾಹ ಅಧಿನಿಯಮ ೧೯೫೫ ವಿವಾಹಗಳ ಬಗ್ಗೆ ಯಾವುದೇ ಒಂದು ಗೊತ್ತುಮಾಡಲ್ಪಟ್ಟ ವಿವಾಹ ಪದ್ಧತಿಯನ್ನು ನಿರ್ದಿಷ್ಟಗೊಳಿಸಿಲ್ಲ. ಇದು ಕಾನೂನುಬದ್ಧ ವಿವಾಹದ ಬಗ್ಗೆ ಕೇವಲ ಆರು ಷರತ್ತುಗಳನ್ನು ಹಾಕಿದೆ.

**ವಿವಾಹದ ಷರತ್ತು :** ಹಿಂದೂ ವಿವಾಹದ ಅಧಿನಿಯಮ ೧೯೫೫ ಜಾರಿಯಾಗುವುದಕ್ಕಿಂತ ಮೊದಲು ವಿವಾಹ ಸಂಬಂಧಿ ಮೂರು ಷರತ್ತುಗಳು ಬಳಕೆಯಲ್ಲಿದ್ದವು. ಈ ಮೂರು ಷರತ್ತುಗಳು ಈ ಕೆಳಗಿನವುಗಳಾಗಿವೆ.

೧. ವಿವಾಹದ ಎರಡೂ ಪಕ್ಷಗಳು ಒಂದೇ ಜಾತಿಗೆ ಸೇರಿದವುಗಳಾಗಿರಬೇಕು.

೨. ಎರಡು ಪಕ್ಷಗಳು ಒಂದೇ ಗೋತ್ರ ಅಥವಾ ಪ್ರವರಕ್ಕೆ ಸೇರತಕ್ಕದ್ದಲ್ಲ.

೩. ವಿವಾಹ ಕಾರ್ಯವನ್ನು ಕ್ರಮಬದ್ಧವಾಗಿ ನಡೆಸಿರತಕ್ಕದ್ದು.

**೧. ಏಕ ಜಾತೀಯತೆ :** ವಿವಾಹದ ಪಕ್ಷಗಳು ಬೇರೆ ಬೇರೆ ಜಾತಿಗಳಿಗೆ ಸೇರಿದ್ದರೆ ವಿವಾಹವು ಅಸಿಂಧು ಎಂದು ಎಣಿಸಲಾಗುತ್ತಿತ್ತು. ಆದರೆ ರೂಢಿಯಲ್ಲಿರುವ ಅಂತರ್ಜಾತಿಯ ವಿವಾಹವು ಅಸಿಂಧುವಾಗುತ್ತಿರಲಿಲ್ಲ. ಪ್ರಾಚೀನ ಹಿಂದೂ ಮೂಲಪಾಠಗಳು ಪ್ರತಿಲೋಮ ವಿವಾಹವನ್ನು ನಿಷೇಧಿಸಿವೆ. ಆದರೆ ಅನುಲೋಮ ವಿವಾಹಕ್ಕೆ ಮನ್ನಣೆಯಿತ್ತು. ಪ್ರತಿಲೋಮವೆಂದರೆ ಕೆಳಜಾತಿಯ ಪುರುಷರು ಮೇಲ್ಜಾತಿಯ ಸ್ತ್ರೀಯನ್ನು ವಿವಾಹವಾಗುವುದು. ಅನುಲೋಮವೆಂದರೆ ಮೇಲ್ಜಾತಿಯ ಪುರುಷರು ಕೆಳಜಾತಿಯ ಸ್ತ್ರೀಯನ್ನುವರಿಸುವುದು.

ಶುದ್ಧ ಹಿಂದೂ ಕಾನೂನಿನಲ್ಲಿ ಹೇಳಲ್ಪಟ್ಟ ವಿವಾಹ ಪದ್ಧತಿಯನ್ನು ಹಲವಾರು ಶಾಸನಗಳ ಮೂಲಕ ಬದಲಾಯಿಸಿ ಅಂತರ್ಜಾತಿಯ ವಿವಾಹಗಳಿಗೆ ಅವಕಾಶ ಕೊಡಲಾಗಿತ್ತು. ಒಂದೇ ಗೋತ್ರ ಅಥವಾ ಪ್ರವರದವರೊಳಗಿನ ವಿವಾಹದ ನಿಷೇಧವನ್ನು ಶಾಸನದಿಂದ ರದ್ದುಮಾಡಲಾಗಿದೆ. ಹಿಂದೂ, ಜೈನ, ಸೀಖ್ಖ ಮತ್ತು ಬೌದ್ಧರೊಳಗಿನ ವಿವಾಹವನ್ನು ಕಾನೂನು ಬದ್ಧಗೊಳಿಸಲಾಗಿದೆ. ವಿಶೇಷ ವಿವಾಹ ಅಧಿನಿಯಮ ೧೮೭೨, ವಿವಾಹ ವಿಧಿಮಾನ್ಯತಾ ಅಧಿನಿಯಮ, ೧೯೪೯ ಹಿಂದೂ ವಿವಾಹ ನಿರ್ಯೋಗ್ಯತೆ ನಿವಾರಣಾ ಅಧಿನಿಯಮ, ೧೯೪೬ ಮತ್ತು ಆರ್ಯವಿವಾಹ ವಿಧಿಮಾನ್ಯತಾ ಅಧಿನಿಯಮ ೧೯೩೭, ಹಳೆಯ ಷರತ್ತುಗಳನ್ನು ಬಹುಮಟ್ಟಿಗೆ ತೊಲಗಿಸಿವೆ.

೨. ಸ್ವಗೋತ್ರ ವಿವಾಹ : ಒಬ್ಬನು ತನ್ನದೇ ಆದ ಗೋತ್ರ ಮತ್ತು ಪ್ರವರದ ಹೆಣ್ಣನ್ನು ವರಿಸಬಾರದೆಂದು ವಿಷ್ಣುವು ಹೇಳಿರುವನು. ಕೆಲವು ಅಂತಸ್ತುಗಳ ತನಕ ಸಂಬಂಧಿತರಾದವರು ಪರಸ್ಪರರನ್ನು ವರಿಸುವುದನ್ನು ಹಿಂದೂ ಕಾನೂನು ನಿಷೇಧಿಸಿತ್ತು. ಆದರೆ ಬಳಕೆಯಲ್ಲಿದ್ದುದಾದರೆ ಇದಕ್ಕೆ ವಿರೋಧವಿರಲಿಲ್ಲ. ಆದುದರಿಂದ ಒಂದೇ ಗೋತ್ರದ ಹೆಣ್ಣು ಮತ್ತು ಗಂಡು ಒಬ್ಬರನೊಬ್ಬರು ವಿವಾಹಿತರಾಗುವುದನ್ನು ನಿಷೇಧಿಸಲಾಗಿತ್ತು. ಈನಿಯಮವು ಶೂದ್ರರಿಗೆ ಅನ್ವಯಿಸುತ್ತಿರಲಿಲ್ಲ. ಕೆಲವು ಮೇಲ್ಜಾತಿಗಳಲ್ಲಿ ಈ ರೂಢಿಯು ಬಳಕೆಯಲ್ಲಿದ್ದುದರಿಂದ ಅವರಲ್ಲಿ ಸ್ವಗೋತ್ರ ವಿವಾಹವು ನಿಷೇಧಿಸಲ್ಪಟ್ಟಿರಲಿಲ್ಲ.

ಬ್ರಾಹ್ಮಣರಲ್ಲಿರುವ ಗೋತ್ರಗಳೂ ಬೇರೆ ಬೇರೆ ಋಷಿಗಳಿಂದ ಬಂದಿರುವ ಶಾಖೆಗಳೆಂದು ಹೇಳಲಾಗುತ್ತದೆ. ಆದುದರಿಂದ ಒಂದೇ ಗೋತ್ರದವರೊಳಗೆ ರಕ್ತ ಸಂಬಂಧವಿದ್ದಿರಬಹುದೆಂಬ ವಿಚಾರಕ್ಕೆ ಪುಷ್ಟಿ ದೊರೆಯುತ್ತದೆ. ಕ್ಷತ್ರಿಯರ ಮತ್ತು ವೈಶ್ಯರ ಗೋತ್ರಗಳು ಅವರ ಕುಟುಂಬದ ಪುರೋಹಿತರ ಗೋತ್ರಗಳಾಗಿವೆ. ಆದುದರಿಂದ ಈ ಎರಡು ಜಾತಿಗಳ ಗೋತ್ರದವರಲ್ಲಿ ರಕ್ತ ಸಂಬಂಧವಿಲ್ಲ.

ಬೌದ್ಧಾಯಗಳ ಶ್ರಾತ ಸೂತ್ರವು ಎಂಟು ಗೋತ್ರಗಳ ಮೂಲ ಪುರುಷರ ಹೆಸರುಗಳನ್ನು ಹೇಳಿದೆ. ವಿಶ್ವಾಮಿತ್ರ, ಜಮದಗ್ನಿ, ಭಾರದ್ವಾಜ, ಗೌತಮ, ಅತ್ರಿ, ವಸಿಷ್ಠ, ಕಾಶ್ಯಪ ಮತ್ತು ಅಗಸ್ತ್ಯ ಇವರೇ ಆ ಎಂಟು ಮಂದಿ ಮೂಲ ಪುರುಷರು.

ಪ್ರವರವು ಗೋತ್ರಕ್ಕಿಂತ ಸ್ವಲ್ಪ ಭಿನ್ನವಾಗಿದೆ. ವಿಶ್ವಾಮಿತ್ರಗೋತ್ರದಲ್ಲಿ ಮೂರು ಪ್ರವರಗಳಿವೆ. 'ವಿಶ್ವಾಮಿತ್ರ', 'ಮರೀಚಿ' ಮತ್ತು ಕೌಶಿಕ ಇವರೊಳಗೆ ವಿಶ್ವಾಮಿತ್ರನು ಗೋತ್ರದ ಪ್ರವರ್ತಕನು. ಇದು ಮರೀಚಿ ಮತ್ತು ಕೌಶಿಕ ಋಷಿಗಳು. ಆದುದರಿಂದ ಯಾವ ಒಬ್ಬ ಪ್ರಮುಖ ಋಷಿಯಿಂದಾಗಿ ಆ ಗೋತ್ರವು ಇನ್ನೊಂದು ಗೋತ್ರದಿಂದ ಪ್ರತ್ಯೇಕಿಸಲ್ಪಡುವದೋ ಅದೇ ಪ್ರವರವಾಗಿದೆ. ಸಾಮಾನ್ಯವಾಗಿ ಐದು ಋಷಿಗಳ ಹೆಸರಿನ ಮೇಲೆ ಪ್ರವರಗಳಿವೆ.

೩. **ವಿವಾಹದ ಕಾರ್ಯದ ಕ್ರಮಬದ್ಧತೆ :** ಹಿಂದೂ ವಿವಾಹ ಕಾರ್ಯದಲ್ಲಿ ಮೂರು ಹಂತಗಳಿವೆ.

ಅ. ನಿಶ್ಚಿತಾರ್ಥ

ಆ. ಅಗ್ನಿಯ ಮುಂದೆ ಮಾಡಲಾಗುವ ಮಂತ್ರೋಚ್ಚಾಟನೆ ಮತ್ತು

ಇ. ಸಪ್ತಪದಿಗಮನ.

ನಿಶ್ಚಿತಾರ್ಥವು ವಿವಾಹದ ಬಗ್ಗೆ ವಾಗ್ದಾನವಾಗಿದ್ದು, ಇದನ್ನು ಮುರಿಯಬಹುದು. ಅಗ್ನಿಯ ಮುಂದೆ ಮಂತ್ರೋಚ್ಚಾಟನೆ ಮಾಡಿ ಕನ್ಯಾದಾನ ಮಾಡುವುದೂ ಸಹ ವಿವಾಹವೆಂದು ಎಣಿಸಿಕೊಳ್ಳುವುದಿಲ್ಲ. ಸಪ್ತಪದಿ ಮುಗಿದ ಮೇಲಷ್ಟೇ ಒಂದು ವಿವಾಹ ಕಾರ್ಯವು ಮುಗಿಯಿತೆಮದು ಹೇಳಬಹುದು. "ವಧೂವರರ ಕೈಗಳನ್ನು ಕೂಡಿಸಿ ಅಗ್ನಿಯ ಮುಂದೆ ಮಂತ್ರೋಚ್ಚಾಟನೆ ಮಾಡುವುದರಿಂದ ವೈವಾಹಿಕ ಸಂಬಂಧವು ಬೆಳೆಯುತ್ತದೆ. ಈ ಕಾರ್ಯವು ಸಪ್ತ ಪದಿಗೆ ಪೂರಕವಾಗಿ ಸಪ್ತಪದಿಯೊಂದಿಗೆ ವಿವಾಹವು ಮುಕ್ತಾಯಗೊಳ್ಳೂತ್ತದೆ ಎಂಬುದನ್ನು ಪಂಡಿತರು ತಿಳಿದುಕೊಳ್ಳಬೇಕು" ಎಂದು ಮನುವು ಹೇಳಿರುವನು. ಏಳಕ್ಕಿಂತ ಹೆಚ್ಚು ಹೆಜ್ಜೆ ತೆಗೆದ ವಿವಾಹವು ಅಸಿಂಧುವಾಗುವುದಿಲ್ಲ. ಬೇರೆ ಬೇರೆ ಜಾತಿಗಳಲ್ಲಿ ರೂಢಿಯಲ್ಲಿರುವ ಇತರ ವಿವಾಹವಿಧಿಗಳೂ ಸಹ ಧರ್ಮದಿಂದ ಮನ್ನಿಸಲ್ಪಟ್ಟಿವೆ. ಪ್ರಾಣಿಗ್ರಹಣ ಮತ್ತು ಸಪ್ತಪದಿ ಇವು ವಿವಾಹದ ಮೂಲಾಧಾರಗಳು.[೨]

## ಹಿಂದೂ ವಿವಾಹದಲ್ಲಿನ ಬದಲಾವಣೆಗಳು

ಹಿಂದೂ ವಿವಾಹಕ್ಕೆ ಸಂಬಂಧಿಸಿದಂತೆ ಮನೋಭಾವ, ಕಲ್ಪನೆ ವಿಧಿವಿಧಾನಗಳು, ಪದ್ಧತಿಗಳು, ವಯಸ್ಸು, ಜೀವನ ಸಂಗಾತಿಗಳ ಆಯ್ಕೆ, ಅನುಸರಿಸುವ ಆಚರಣೆಗಳು ಮೊದಲಾದವುಗಳಲ್ಲಿ ಮಹತ್ತರ ಬದಲಾವಣೆಗಳಾಗುತ್ತಿರುವುದು ಸರ್ವವಿದಿತವಾದ ಸಂಗತಿಯಾಗಿರುವುದು. ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರಭಾವ ವ್ಯಕ್ತಿವಾದದ ಪ್ರಾಧಾನ್ಯತೆ, ಔದ್ಯೋಗೀಕರಣ, ನಗರೀಕರಣ, ಆಧುನೀಕರಣ ಸಾರ್ವಜನಿಕ ಶಿಕ್ಷಣ, ವಿಶೇಷ ಕಾನೂನುಗಳು ಇವೇ ಮೊದಲಾದ ಕಾರಣಗಳಿಂದಾಗಿ ಹಿಂದೂ ವಿವಾಹ ಕ್ಷೇತ್ರದಲ್ಲಿ ತೀವ್ರತರದ ಮಾರ್ಪಾಡುಗಳಾಗುತ್ತಿರುವುದನ್ನು ವ್ಯಾಫಕವಾಗಿ ಗುರುತಿಸಬಹುದಾಗಿದೆ. ಪ್ರಾಚೀನ ಹಿಂದೂ ವಿವಾಹದ ವ್ಯವಸ್ಥೆಗಳಿಗೂ ಆಧುನಿಕ ಹಿಂದೂ ವಿವಾಹದ ಏರ್ಪಾಟುಗಳಿಗೂ ಬಹಳಷ್ಟು ಅಂತರವಿರುವುದನ್ನು ಕಾಣಬಹುದಾಗಿದೆ. ಜಾತಿ ವ್ಯವಸ್ಥೆಯ ಕಲುಷಿತ ಕಟ್ಟುಪಾಡುಗಳು ಕಠಿಣವಾದ ರೀತಿಯಲ್ಲಿ ಶತಶತಮಾನಗಳು ಸಾಗಿಬರುತ್ತಿದ್ದ ಹಿಂದಿನ ಕಾಲಗಳಲ್ಲಿ ಹಿಂದೂ ವಿವಾಹ ಅಷ್ಟೇನೂ ಹೆಚ್ಚಿನ ಬದಲಾವಣೆಗಳನ್ನು ಹಲವು ಶತಶತ ಮಾನಗಳವರೆಗೂ ಕಾಣದೇ ಬಂದಿದ್ದರೂ, ಔದ್ಯೋಗೀಕರಣ, ಪಾಶ್ಚಾತ್ಯೀಕರಣ, ಆಧುನೀಕರಣ, ಸ್ತ್ರೀ ಶಿಕ್ಷಣ, ಸಮಾನತೆ, ಸಮಾನ ಅವಕಾಶಗಳು ಪ್ರಜಾಸತ್ತಾತ್ಮಕ ಮೌಲ್ಯಗಳ ಅನುಷ್ಠಾನ, ಜನಜಾಗೃತಿ ವಿವಿಧ ಚಳುವಳಿಗಳು ಇವೇ ಮೊದಲಾದವುಗಳ ಪ್ರಭಾವದಿಂದಾಗಿ ಹಿಂದೂ ವಿವಾಹದಲ್ಲಿ ಅಪಾರವಾದ

ಬದಲಾವಣೆಗಳಾಗುತ್ತಿವೆ. ಆ ಬಗೆಯ ಬದಲಾವಣೆಗಳನ್ನು ವಿವಿದ ವಿಷಯಗಳಿಗೆ ಸಂಬಂಧಿಸಿದಂತೆ ವಿವರಿಸಬಹುದಾಗಿದೆ.

**೧. ವಿವಾಹದ ಪಾವಿತ್ರತೆ ಕ್ಷೀಣಿಸುತ್ತಿದೆ :** ಹಿಂದೂಗಳಲ್ಲಿ ವಿವಾಹದ ಬಗ್ಗೆ ಪವಿತ್ರ ಭಾವನೆ ಇತ್ತು. ಪತ್ನಿಯು ತನ್ನ ಪತಿಯನ್ನು ದೇವರೆಂದು ಭಾವಿಸಿದ್ದಳು. ಪತಿಪತ್ನಿಯರ ಸಂಬಂಧವು ಈ ಜನ್ಮದಲ್ಲಿಯೇ ಅಲ್ಲದೇ ಏಳೇಳು ಜನ್ಮಗಳವರೆಗೂ ಮುಂದುವರಿಯುವುದೆಂದು ನಂಬಿದ್ದರು. ವಿವಾಹವು ಹೋಮ, ಪ್ರಾಣಿಗ್ರಹಣ, ಮಂತ್ರಗಳು, ಸಪ್ತಪದಿ ಮೊದಲಾದ ವಿವಿಧ ವಿಧಿವಿಧಾನಗಳನ್ನು ಅನುಸರಿಸಿ ಸಾಗುತ್ತಿತ್ತು. ಪತಿಯು ಕೊಡಬಹುದಾದ ಉಪಟಳಗಳನ್ನು ಪತ್ನಿಯು ಮೌನದಿಂದಿದ್ದು ಅನುಭವಿಸುತ್ತಿದ್ದಳು. ಪತಿಯು ಕ್ರೂರಿಯಾಗಿರಲಿ, ಕುಡುಕನಾಗಿರಲಿ, ವ್ಯಭಿಚಾರಿಯಾಗಿರಲಿ ನಪುಸಂಕನಾಗಿರಲಿ ಒಮ್ಮೆ ವಿವಾಹವಾದರೆ ಮುಗಿಯಿತು. ಅವನ ಸೇವೆಯೇ ದೇವರ ಸೇವೆಯೆಂದು ತಿಳಿದು ಅನ್ಯಥಾ ಭಾವಿಸದೇ ದಾಂಪತ್ಯ ಜೀವನ ನಡೆಸುತ್ತಿದ್ದಳು. ಅವಳ ಇಚ್ಛೆ-ಅನಿಚ್ಛೆಗಳಿಗೆ, ನೋವು-ನಲಿವುಗಳಿಗೆ, ಅನಿಸಿಕೆ, ಭಾವನೆಗಳಿಗೆ ಬೆಲೆಯಿರಲಿಲ್ಲ. ಪತಿಕೃಪಣನಾಗಲಿ, ಧಾರಾಳಿಯಾಗಲಿ, ಧರ್ಮಿಷ್ಠನಾಗಲಿ, ಪಾಪಿಷ್ಠನಾಗಲಿ ಅವನನ್ನೇ ಚಾಚುತಪ್ಪದೇ ಅನುಸರಿಸುತ್ತಾ ಜೀವನ ಸಾಗಿಸಬೇಕಾಗಿತ್ತು.

ಆದರೆ ಇಂದು ಪತ್ನಿಯು ತನ್ನ ಪತಿಯ ಬಗ್ಗೆ, ವಿವಾಹ ಬಂಧನದ ಬಗ್ಗೆ ಆ ಬಗೆಯ ಪಾವಿತ್ರತೆಯನ್ನು, ಧಾರ್ಮಿಕ ಮಹತ್ವವನ್ನು, ಸಾಂಸ್ಕೃತಿಕ ಶ್ರೇಷ್ಠತೆಯನ್ನು ಭಾವಿಸುವುದರಲ್ಲಿ ಹೆಚ್ಚಿನ ಪ್ರಮಾಣದ ಕ್ಷೀಣಿಸುವಿಕೆ ಕಂಡುಬರುತ್ತದೆ. ಔದ್ಯೋಗೀಕರಣ, ಆಧುನೀಕರಣ, ಸ್ತ್ರೀ ಶಿಕ್ಷಣ ಮೊದಲಾದವುಗಳ ಪ್ರಭಾವದಿಂದಾಗಿ ಪತ್ನಿಯಾದವಳು ವಿವಾಹದ ವತಿಯಿಂದ ತನಗೊದಗಿದ ಸುಖದುಃಖಗಳನ್ನು ನೋವು-ನಲಿವುಗಳನ್ನು ತೂಗಿ ನೋಡತೊಡಗಿದ್ದಾಳೆ. ಅವಳ ಭಾವನೆಗಳಿಗೂ ಬೆಲೆ ಪಡೆಯಲು ಹವಣಿಸುತ್ತಿದ್ದಾಳೆ. ಬದುಕಿನ ಬವಣೆಯಲ್ಲಿ ಕೇವಲ ಭ್ರಮೆಗಳಿಗೆ ಬೆಲೆಕೊಡದೆ ವಾಸ್ತವಿಕತೆಯನ್ನರಿತು ಜೀವನವನ್ನು ಅನುಭವಿಸಲು ಹಾತೊರೆಯುತ್ತಿದ್ದಾಳೆ. ತನ್ನತನವನ್ನು ಕಂಡುಕೊಂಡು ತಾನೂ ಒಬ್ಬ ವ್ಯಕ್ತಿ ಹಾಗೂ ಶಕ್ತಿಯಾಗಿರಲು ಶ್ರಮಿಸುತ್ತಿದ್ದಾಳೆ. ಇದರಿಂದಾಗಿ ಅವಳಲ್ಲಿ ಪರಂಪರಾಗತ ವಿವಾಹ ವ್ಯವಸ್ಥೆಯಲ್ಲಿನ ಒಳಿತನದ ಬಗ್ಗೆ ಹೆಚ್ಚಿನ ಗೌರವವೂ, ದೋಷಗಳ ಬಗ್ಗೆ ತಾತ್ಸಾರವೂ ಮೂಡುತ್ತಿರುವುದರಲ್ಲಿ ಆಶ್ಚರ್ಯವಿಲ್ಲ.

**೨. ಸಂಗಾತಿಯ ಆಯ್ಕೆ :** ಹಿಂದೆ ಹಿಂದೂ ವಿವಾಹ ವ್ಯವಸ್ಥೆಯಲ್ಲಿ ವರನಾಗಲೀ, ವಧುವಾಗಲೀ ತಮ್ಮ ತಮ್ಮ ಜೀವನ ಸಂಗಾತಿಯನ್ನು ತಾವೇ ಆರಿಸಿಕೊಳ್ಳುವಷ್ಟು ವಿಚಾರವಂತರೂ, ಧೈರ್ಯವಂತರೂ ಸ್ವತಂತ್ರರೂ ಆಗಿರಲಿಲ್ಲ. ಆ ಬಗ್ಗೆ ಏನೇನೂ ಅರಿಯದ ಹಸುಳೆಯಾಗಿದ್ದಾಗಲೇ ಬಾಲ್ಯವಿವಾಹ ಪದ್ಧತಿಯಂತೆ ವಿವಾಹವು ನಡೆದುಹೋಗುತ್ತಿದ್ದುದರಿಂದ ತಮ್ಮ ತಮ್ಮ ಜೀವನ ಸಂಗಾತಿಗಳ ಆಯ್ಕೆಯಲ್ಲಿ

ಅವರ ಪಾತ್ರ ತುಂಬಾ ಗೌಣವಾಗಿತ್ತು. ಅದರಲ್ಲಿಯೂ ಅವಿಭಕ್ತ ಕುಟುಂಬ ವ್ಯವಸ್ಥೆಯೇ ಅಧಿಕ ಪ್ರಮಾಣದಲ್ಲಿದ್ದು, ಕರ್ತನ ಮಾತಿಗೆ ಹಿರಿಯರ ಅನಿಸಿಕೆಗಳಿಗೆ ಎದುರಾಡುವ ಸಾಧ್ಯತೆ ಇರಲೇ ಇಲ್ಲ ಎಂದರೆ ಅತಿಶಯೋಕ್ತಿಯಾಗದು. ಮನೆತನಕ್ಕೆ ಸೂಕ್ತವೆನಿಸಿದ ಮನೆಯ ತಂದೆತಾಯಿಯರು, ಹಿರಿಯರು ನೋಡಿ ಆಯ್ಕೆ ಮಾಡಿದ ವಧುವನ್ನು ಯಾವುದೇ ಅಕ್ಷೇಪಣೆ ಇಲ್ಲದೆ ವರಿಸಬೇಕಾಗಿತ್ತು. ವಧೂವರರ ಪ್ರಥಮ ಭೇಟಿ ವಿವಾಹ ಮಂಟಪದಲ್ಲಿಯೇ ಆಗುತ್ತಿತ್ತು.

ಆದರೆ ಈಗ ಕಾಲ ಬದಲಾಗಿದೆ. ಜೀವನ ಸಂಗಾತಿಯ ಆಯ್ಕೆಯಲ್ಲಿ ತಂದೆ ತಾಯಿಯರು ಹಾಗೂ ಹಿರಿಯರ ಪಾತ್ರ ಗೌಣವಾಗಿದ್ದು ವಿವಾಹವಾಗುವ ವ್ಯಕ್ತಿಯ ಪಾತ್ರ ಮುಖ್ಯವಾಗಿರುತ್ತದೆ. ವರನು ಹೆಚ್ಚಿನ ಸ್ವಾತಂತ್ರ್ಯವುಳ್ಳವನಾಗಿದ್ದಾನೆ. ವಿವಾಹಪೂರ್ವದಲ್ಲಿಯೇ ಪರಸ್ಪರ ಭೇಟಿ ಮಾಡಿ ಅರಿಯಲು ಸಾಕಷ್ಟು ಅವಕಾಶಗಳನ್ನು ಮಾಡಿಕೊಳ್ಳಬಹುದಾದ ಸಾಧ್ಯತೆ ಇದೆ. ಈ ವಿಷಯದಲ್ಲಿ ಇಂದಿಗೂ ಪುರುಷನಿಗಿರುವಷ್ಟು ಸ್ವಾತಂತ್ರ್ಯ ಅವಕಾಶಗಳು ಸ್ತ್ರೀಗೆ ಇಲ್ಲದಿರುವುದನ್ನು ಗುರುತಿಸಬಹುದಾಗಿದೆ. ವಧುವರರ ಗಮನ ಬಹಳಮಟ್ಟಿಗೆ ತಮ್ಮ ಜಾತಿ, ಉಪಜಾತಿ ಹಾಗೂ ವರ್ಗಗಳ ಕಡೆಗೆ ಕೇಂದ್ರಿಕೃತವಾಗಿರುವುದನ್ನು ಕಡೆಗಣಿಸುವಂತಿಲ್ಲ.

೩. **ಹಿಂದೂ ವಿವಾಹದ ವಯಸ್ಸು :** ಹಿಂದೆ ಹಿಂದೂ ವಿವಾಹ ವ್ಯವಸ್ಥೆಯಲ್ಲಿ ವರನಾಗಲೀ, ವಧುವಾಗಲಿ ತಮ್ಮ ತಮ್ಮ ಜೀವನ ಸಂಗಾತಿಯನ್ನು ತಾವೇ ಆರಿಸಿಕೊಳ್ಳುವಷ್ಟು ವಿಚಾರವಂತರೂ, ಧೈರ್ಯವಂತರೂ, ಸ್ವತಂತ್ರರೂ ಆಗಿರಲಿಲ್ಲ. ಆ ಬಗ್ಗೆ ಏನೇನೂ ಅರಿಯದ ಹಸುಳೆಯಾಗಿದ್ದಾಗಲೇ ಬಾಲ್ಯವಿವಾಹ ಪದ್ಧತಿಯಂತೆ ವಿವಾಹವು ನಡೆದುಹೋಗುತ್ತಿದ್ದುದರಿಂದ ತಮ್ಮ ತಮ್ಮ ಜೀವನ ಸಂಗಾತಿಗಳ ಆಯ್ಕೆಯಲ್ಲಿ ಅವರ ಪಾತ್ರ ತುಂಬಾ ಗೌಣವಾಗಿತ್ತು. ಅದರಲ್ಲಿಯೂ ಅವಿಭಕ್ತ ಕುಟುಂಬ ವ್ಯವಸ್ಥೆಯೇ ಅಧಿಕ ಪ್ರಮಾಣದಲ್ಲಿದ್ದ ಕರ್ತನ ಮಾತಿಗೆ, ಹಿರಿಯರ ಅನಿಸಿಕೆಗಳಿಗೆ ಎದುರಾಡುವ ಸಾಧ್ಯತೆ ಇರಲೇ ಇಲ್ಲ ಎಂದರೆ ಅತಿಶಯೋಕ್ತಿಯಾಗದು. ಮನೆತನಕ್ಕೆ ಸೂಕ್ತವೆನಿಸಿದ, ಮನೆಯ ತಂದೆ ತಾಯಿಯರು, ಹಿರಿಯರು ನೋಡಿ ಆಯ್ಕೆ ಮಾಡಿದ ವಧುವನ್ನು ಯಾವುದೇ ಆಕ್ಷೇಪಣೆ ಇಲ್ಲದೇ ಒಪ್ಪಿಸಬೇಕಾಗಿತ್ತು. ವಧೂವರರ ಪ್ರಥಮ ಭೇಟಿ ವಿವಾಹ ಮಂಟಪದಲ್ಲಿಯೇ ಆಗುತ್ತಿತ್ತು.

ಆದರೆ ಈಗ ಕಾಲ ಬದಲಾಗಿದೆ. ಜೀವನ ಸಂಗಾತಿಯ ಆಯ್ಕೆಯಲ್ಲಿ ತಂದೆ ತಾಯಿಯರು ಹಾಗೂ ಹಿರಿಯರ ಪಾತ್ರ ಗೌಣವಾಗಿದ್ದು, ವಿವಾಹವಾಗುವ ವ್ಯಕ್ತಿಯ ಪಾತ್ರಮುಖ್ಯವಾಗಿರುತ್ತದೆ. ವರನು ಹೆಚ್ಚಿನ ಸ್ವಾತಂತ್ರ್ಯವುಳ್ಳವನಾಗಿದ್ದಾನೆ. ವಿವಾಹ ಪೂರ್ವದಲ್ಲಿಯೇ ಪರಸ್ಪರ ಭೇಟಿ ಮಾಡಿ ಅರಿಯಲು ಸಾಕಷ್ಟು ಅವಕಾಶಗಳನ್ನು ಮಾಡಿಕೊಳ್ಳಬಹುದಾದ ಸಾಧ್ಯತೆ ಇದೆ. ಈ ವಿಷಯದಲ್ಲಿ ಇಂದಿಗೂ ಪುರುಷನಿಗಿರುವಷ್ಟು ಸ್ವಾತಂತ್ರ್ಯ ಅವಕಾಶಗಳು ಸ್ತ್ರೀಗೆ ಇಲ್ಲಿದಿರುವುದನ್ನು ಗುರುತಿಸಬಹುದಾಗಿದೆ. ವಧೂವರರ ಗಮನ

ಬಹಳಮಟ್ಟಿಗೆ ತಮ್ಮ ಜಾತಿ, ಉಪಜಾತಿ ಹಾಗೂ ವರ್ಗಗಳ ಕಡೆಗೆ ಕೇಂದ್ರಿಕೃತವಾಗಿರುವುದನ್ನು ಕಡೆಗಣಿಸುವಂತಿಲ್ಲ.

**೪. ವಿವಾಹ ವಯಸ್ಸು :** ಹಿಂದೂಗಳಲ್ಲಿ ಶಿಶು ತೊಟ್ಟಿಲಿನಲ್ಲಿದ್ದಾಗಲೇ ವಿವಾಹ ಮಾಡುವ, ಪದ್ಧತಿ ಬಹಳ ಕಾಲದವರೆಗೆ ಆಚರಣೆಯಲ್ಲಿತ್ತು. ಚಿಕ್ಕ ವಯಸ್ಸಿಗೆ ವಿವಾಹ ಮಾಡುವುದು, ಋತುಮತಿಯಾಗುವುದಕ್ಕೆ ಮುನ್ನವೇ ವಿವಾಹ ಮಾಡುವುದು, ವಯಸ್ಕಳಾದ ೩ ವರ್ಷಗಳೊಳಗೆ ವಿವಾಹ ಮಾಡುವುದು ಶತಶತಮಾನಗಳವರೆಗೆ ರೂಢಿಯಲ್ಲಿತ್ತು. ಆದರೆ ಇಂದು ಬಾಲ್ಯವಿವಾಹ ಬಹಳ ಅಪರೂಪವಾಗಿದೆ. ವಿವಾಹದ ವಯಸ್ಸು ಸ್ತ್ರೀಗೆ ೧೮ ವರ್ಷ ಮತ್ತು ಪುರುಷನಿಗೆ ೨೧ ವರ್ಷ ಎಂದು ಸರ್ಕಾರದ ವತಿಯಿಂದಲೇ ನಿಗಧಿಯಾಗಿದೆ. ಶಿಕ್ಷಣ ಅದರಲ್ಲಿಯೂ ಉನ್ನತ ಶಿಕ್ಷಣವನ್ನು ಪಡೆಯುವುದು, ನೌಕರಿಯ ನಿರೀಕ್ಷೆಯಲ್ಲಿರುವುದು, ಆರ್ಥಿಕವಾಗಿ ಸ್ವಾವಲಂಬಿಯಾಗಲಿರುವುದು, ಮನೆಯಲ್ಲಿನ ಅಕ್ಕ, ತಂಗಿಯರ ವಿವಾಹವಾಗದಿರುವುದು, ವರದಕ್ಷಿಣೆ ಪಿಡುಗು ಇವೇ ಮೊದಲಾದ ಕಾರಣಗಳಿಂದಾಗಿ ಹೆಚ್ಚು ಹೆಚ್ಚು ಜನರು ತಡವಾಗಿಯೇ ವಿವಾಹವಾಗುತ್ತಿರುವರು.

೧೯೨೯ರಲ್ಲಿ ಬಾಲ್ಯ ವಿವಾಹ ನಿಷೇಧ ಕಾಯಿದೆಯು ಬಾಲ್ಯವಿವಾಹವನ್ನು ನಿಷೇಧಿಸಿತು. ೧೯೫೫ ಹಿಂದೂ ವಿವಾಹ ಕಾಯಿದೆಯು ಜಮ್ಮು ಮತ್ತು ಕಾಶ್ಮೀರ ರಾಜ್ಯವನ್ನು ಬಿಟ್ಟು ಇಡೀ ಭಾರತಕ್ಕೆ ಅನ್ವಯಿಸುತ್ತದೆ. ಇದು ಹಿಂದೂ, ಬೌದ್ಧ, ಜೈನ ಮತ್ತು ಸಿಖ್ ಮತಸ್ಥರಿಗೆ ಅನ್ವಯಿಸುತ್ತದೆ. ಇದು ಹಿಂದೂ ವಿವಾಹ ಸಂಸ್ಥೆಯಲ್ಲಿ ಕೆಳಕಂಡ ಮಾರ್ಪಾಡನ್ನು ಮಾಡಿದೆ.

ಅ. ಈ ಕಾಯಿದೆಯು ಹಿಂದೂ ವಿವಾಹಗಳನ್ನು ರದ್ದುಗೊಳಿಸಿದ ರದ್ದುಗೊಳಿಸಬೇಕಾದ ಮತ್ತು ಸಿಂಧುತ್ವ ಹೊಂದಿದ ಎಂದು ಮೂರು ಬಗೆಗಳಾಗಿ ವಿಂಗಡಿಸಿರುವುದು.

ಆ. ಈ ಕಾಯಿದೆಯು ವಿವಾಹದ ಕನಿಷ್ಟ ವಯಸ್ಸನ್ನು ಹುಡುಗಿಯರಿಗೆ ೧೫ ವರ್ಷ ಹುಡುಗರಿಗೆ ೧೮ ವರ್ಷವೆಂದು ನಿಗಧಿಪಡಿಸಿತ್ತು. ಆದರೆ ೧೯೭೧ರಲ್ಲಿ ಆದ ತಿದ್ದುಪಡಿಯ ಪ್ರಕಾರ ಪ್ರಸ್ತುತವಾಗಿರುವ ವಿವಾಹದ ವಯಸ್ಸು ಪುರುಷನಿಗೆ ೨೧ ವರ್ಷ ಮತ್ತು ಸ್ತ್ರೀಗೆ ೧೮ ವರ್ಷ.

ಇ. ಈ ಕಾಯಿದೆಯು ಏಕಪತ್ನಿತ್ವ ವಿವಾಹದ ಕಡ್ಡಾಯಕ್ಕೆ ಅವಕಾಶ ಮಾಡಿರುವುದು.

ಈ. ಪತಿಯ ಅಧಿಕಾರಯುತ ಮನೋಭಾವ

ಹಿಂದೂ ಸಮಾಜವು ಪುರುಷ ಪ್ರಧಾನವಾದುದಾಗಿದ್ದ ಗಂಡು ಸಂತತಿಗೆ ಹೆಚ್ಚಿನ ಪ್ರಾಶಸ್ತ್ಯ ಕೊಡುವುದು. ಸ್ತ್ರೀ ಬಾಲ್ಯದಲ್ಲಿ ತಂದೆಯ, ಯೌವನದಲ್ಲಿ ಪತಿಯ ವೃದ್ಧಾಪ್ಯದಲ್ಲಿ ಮಕ್ಕಳ ರಕ್ಷಣೆಯಲ್ಲಿರಬೇಕೆಂಬುದಾಗಿ ವಿಧಿಸಿರುವುದು ಇನ್ನೂ ಹಲವಾರು ಕಾರಣಗಳಿಂದಾಗಿ ಕುಟುಂಬದಲ್ಲಿ ಪತಿಗೆ ಹೆಚ್ಚಿನ ಅಧಿಕಾರ

ಪ್ರಾಪ್ತವಾಗಿರುವುದು ಬಹಳ ಹಿಂದಿನಿಂದಲೂ ಇದೆ. ಮನು, ಯಜ್ಞವಲ್ಕ್ಯ ಮೊದಲಾದ ಹಿಂದೂ ಶಾಸ್ತ್ರಕಾರರು ಪುರುಷನಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿರುವರು. ಪತ್ನಿಯು ಸ್ವಂತಿಕೆಯಿಲ್ಲದೆ ಪತಿಯನ್ನು ಅನುಸರಿಸಿಯೇ ನಡೆಯಬೇಕಾಗಿತ್ತು.

ಆದರೆ ಇತ್ತೀಚಿಗೆ ದಾಂಪತ್ಯ ಜೀವನದಲ್ಲಿ ಸತಿಪತಿಯರ ಹಕ್ಕು ಕರ್ತವ್ಯಗಳ ಬಗ್ಗೆ ಧ್ಯೇಯಧೋರಣೆಗಳ ಬಗ್ಗೆ ಮಾರ್ಪಾಟುಗಳಾಗುತ್ತಿದೆ. ಸ್ತ್ರೀ ಶಿಕ್ಷಣ ಹರಡಿದಂತೆ, ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ಹೆಚ್ಚಿದಂತೆ ಬದಲಾವಣೆ ತೀವ್ರಗೊಳ್ಳುತ್ತಿದೆ. ಸ್ತ್ರೀ ಪುರುಷರಿಗೆ ಸಮಾನತೆ, ಸಮಾನ ಗೌರವ, ಪರಿಸ್ಥಿತಿಗಳನ್ನು ಅರಿತು ಸಹಕರಿಸಿ ನಡೆಯುವುದು ಅಭ್ಯಾಸವಾಗುತ್ತಿದೆ. ಪತಿಯ ದಬ್ಬಾಳಿಕೆ, ಅಧಿಕಾರಯುತ ಮನೋಭಾವ ದಿನದಿನಕ್ಕೆ ಕ್ಷೀಣಿಸುತ್ತಿದ್ದು, ಅನ್ಯೋನ್ಯತೆ ಸಹಕಾರಯುತ ಮನೋಭಾವ ಸ್ಥಾನಪಡೆಯುತ್ತಿವೆ. ನಗರ ಪರಿಸರದಲ್ಲಿ ಈ ದಿಸೆಯಲ್ಲಿ ಸಾಕಷ್ಟು ಸುಧಾರಣೆಯಾಗಿರುವುದಾದರೂ ಗ್ರಾಮೀಣ ಪರಿಸರದಲ್ಲಿ ಇನ್ನೂ ಹೆಚ್ಚಿನ ಸುಧಾರಣೆ ಆಗಬೇಕಾಗಿರುವುದು.

**೫. ಲೈಂಗಿಕ ನೈತಿಕತೆಯ ಕ್ಷೀಣಿಸುವಿಕೆ :** ಮಾನವ ಸಹಜ ಪ್ರವೃತ್ತಿಯಾದ ಕಾಮದ ತೃಪ್ತಿಗೆ ಹಿಂದೂ ಸಮಾಜದಲ್ಲಿಯೂ ಯೋಗ್ಯ ಸ್ಥಾನವನ್ನು ನೀಡಲಾಗಿದೆ. ಅದನ್ನೂ ಒಂದು ಪುರಷಾರ್ಥವಾಗಿ ಪರಿಗಣಿಸಲಾಗಿದೆ. ಆ ಲೈಂಗಿಕ ಅಪೇಕ್ಷೆಯ ಪೂರೈಕೆ ಗೋಪ್ಯವಾದುದಾಗಿದ್ದು ಹಿಂದೂ ಸಮಾಜವೂ ಸಹ ತನ್ನದೇ ಆದ ನೀತಿಸಂಹಿತೆಯ ಚೌಕಟ್ಟಿನಲ್ಲಿ ಪೂರೈಸಿಕೊಳ್ಳಲು ನಿರ್ದೇಶಿಸಿದೆ. ಹಿಂದೂ ಶಾಸ್ತ್ರಕಾರರು ಲೈಂಗಿಕ ನೈತಿಕತೆಯನ್ನು ಎತ್ತಿ ಹಿಡಿದಿರುವವರು. ಸ್ತ್ರೀಯು ವಿವಾಹಪೂರ್ವ ತನ್ನ ಕನ್ಯಾತ್ವವನ್ನು ಕಾಪಾಡಿಕೊಂಡಿರಬೇಕಾಗಿಯೂ, ವಿವಾಹದ ನಂತರ ತನ್ನ ಪತಿಗೆ ಕಾಯಾ, ವಾಚಾ, ಮನಸಾ ನಿಷ್ಠೆಯಿಂದಿದ್ದು ಪಾತಿವ್ರತ್ಯವನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರಲೂ ವಿಧಿಸಲಾಗಿರುವುದು. ಈ ಎರಡೂ ಅಂಶಗಳ ಬಗ್ಗೆ ಹಿಂದೂಗಳಲ್ಲಿ ಹೆಚ್ಚಿನ ಪ್ರಾಮುಖ್ಯತೆಯನ್ನು ಭಾವಿಸಲಾಗಿರುವುದು. ಯುಗಯುಗಳಿಂದಲೂ ಇವುಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವುದನ್ನು ಅನೇಕ ನಿರ್ದೇಶನಗಳಿಂದ ಕಾಣಬಹುದಾಗಿದೆ. ಉದಾಹರಣೆಗೆ ಪತಿವ್ರತಾಶಿರೋಮಣಿಯಾದ ಸೀತಾದೇವಿಯ ಪ್ರಾತಿವೃತ್ಯವನ್ನೇ ಶಂಕಿಸಿದ ಶ್ರೀರಾಮಚಂದ್ರ ಅಗ್ನೀ ಪರೀಕ್ಷೆಗೆ ಗುರಿಮಾಡಿದ್ದು, ಆಕೆ ಅಗ್ನಿಗೆ ಧಮುಕಿ ನಿರ್ದೋಷಿ ಎಂದು ಸಾಬೀತಾದುದಾಗಿ ನಂಬಲಾಗಿದೆ. ಇತ್ತೀಚಿನ ದಿನಗಳಲ್ಲಿ ಇಂತಹ ಆದರ್ಶಗಳು ಕಣ್ಮರೆಯಾಗುತ್ತಿರುವಂತೆ ಕಂಡುಬರುತ್ತಿರುವುದು ನಿಜವಾದರೂ ಹಿಂದೂಗಳಲ್ಲಿ ಲೈಂಗಿಕ ನೈತಿಕತೆಗೆ ಹೆಚ್ಚಿನ ಪ್ರಾಶಸ್ತ್ಯ ಇಂದಿಗೂ ಇರುವುದನ್ನು ಕಡೆಗಣಿಸುವಂತಿಲ್ಲ.

**೬. ಚಿಕ್ಕ ಕುಟುಂಬ ಸ್ಥಾಪನೆ :** ಹಿಂದೂ ಸಮಾಜದಲ್ಲಿಯೂ ಜೀವನ ಸಂಗಾತಿಯ ಆಯ್ಕೆಯಲ್ಲಿ ಸ್ವಾತಂತ್ರ್ಯ ಮತ್ತು ಸಮಾನತೆಗಳು ಸಾಗಿಬರುತ್ತಿದ್ದ ಅವಿಭಕ್ತ ಕುಟುಂಬ ವ್ಯವಸ್ಥೆಯಾಗಿ ಅನೂಚಾನವಾಗಿ ಸಾಗಿ

ಬರುತ್ತಿದ್ದ ಅವಿಭಕ್ತ ಕುಟುಂಬ ವ್ಯವಸ್ಥೆಯು ತನ್ನ ಹಲವಾರು ಅನಾನುಕೂಲಗಳಿಂದಾಗಿ ಆಧುನಿಕ ಪರಿಸ್ಥಿತಿಗಳಿಗನುಗುಣವಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿದೆ. ಆಧುನಿಕ ದಂಪತಿಗಳು ಅವಿಭಕ್ತ ಕುಟುಂಬದಲ್ಲಿ ಉಳಿದು ಸಹಜೀವನ ನಡೆಸಲು ಅಷ್ಟಾಗಿ ಇಚ್ಛಿಸುತ್ತಿಲ್ಲ. ಅತ್ತೆ, ನಾದಿನಿ, ಮಾವ, ಮೈದುನ ಮೊದಲಾದವರ ಉಪಟಳ ಇಂದಿಗೂ ಇದ್ದು ತನ್ಮೂಲಕ ಹೊಂದಾಣಿಕೆ ಕಷ್ಟಸಾಧ್ಯವಾಗುತ್ತಿದೆ. ಸುಶಿಕ್ಷಿತ ನವ ಗೃಹಿಣಿಯು ಹೆಚ್ಚಿನ ಸ್ವಾತಂತ್ರ್ಯ, ಸಮಾನತೆ, ಸಮಾನ ಗೌರವ ಹಾಗೂ ಸ್ಥಾನಮಾನಗಳನ್ನು ಅಪೇಕ್ಷಿಸುತ್ತಿದ್ದಾರೆ. ಅವುಗಳ ಕೊರತೆಯಿದ್ದಾಗ ಅವಿಭಕ್ತ ಕುಟುಂಬಗಳೂ ಕ್ರಮೇಣವಾಗಿ ನಶಿಸಿಹೋಗುತ್ತಾ ಚಿಕ್ಕ ಕುಟುಂಬಗಳು ಅಧಿಕ ಸಂಖ್ಯೆಯಲ್ಲಿ ಅಸ್ತಿತ್ವಕ್ಕೆ ಬರುತ್ತಿವೆ. ದಂಪತಿಗಳು ಮತ್ತು ಅವರ ಅವಿವಾಹಿತ ಮಕ್ಕಳಿರುವ ಚಿಕ್ಕ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿವೆ.

೭. **ಪರಸ್ಪರ ಹೊಂದಾಣಿಕೆ ಮತ್ತು ಸಹಕಾರದ ಅಗತ್ಯ :** ಆಧುನಿಕ ಕಾಲ ಪರಿಸ್ಥಿತಿಗಳಿಗನುಗುಣವಾಗಿ ಹಿಂದೂ ಸಮಾಜ ವ್ಯವಸ್ಥೆಯಲ್ಲಿಯೂ ವಿವಾಹದ ಬಗೆಗಿನ ಧ್ಯೇಯ ಧೋರಣೆಗಳು ಬದಲಾಗುತ್ತಿವೆ. ಸುಶಿಕ್ಷಿತ ನವಗೃಹಿಣಿಯು ಹೆಚ್ಚಿನ ಸ್ವಾತಂತ್ರ್ಯ, ಸಮಾನತೆ, ಸಮಾನ ಗೌರವ ಹಾಗೂ ಸ್ಥಾನಮಾನಗಳನ್ನು ಅಪೇಕ್ಷಿಸುತ್ತಿರಲಾಗಿ ವೈವಾಹಿಕ ಜೀವನವು ಕೇವಲ ದರ್ಪ, ದೌರ್ಜನ್ಯಗಳು, ಕ್ಷುಲ್ಲಕ ಪ್ರತಿಷ್ಠೆಗಳಿಂದ ಕೂಡಿರದೆ ಪ್ರೀತಿ, ವಿಶ್ವಾಸ, ಸಹನೆ, ಸಹೃದಯತೆ, ಹೊಂದಾಣಿಕೆ, ಸಹಕಾರ ಮೊದಲಾದ ಉದಾತ್ತ ಜೀವನ ಮೌಲ್ಯಗಳಿಂದ ಕೂಡಿರುವಂತಾಗುವ ವಾತಾವರಣ ನಿರ್ಮಾಣಗೊಳ್ಳುತ್ತದೆ. ಸಂಸಾರ ರಥ ಸುಗಮವಾಗಿ ಸಾಗಲು ಅದರ ಎರಡು ಚಕ್ರಗಳೋಪಾದಿ ಯಲ್ಲಿರುವ ದಂಪತಿಗಳ ನಡುವೆ ಪರಸ್ಪರ ಪ್ರೀತಿ ಅನ್ಯೋನ್ಯತೆ ಸಾಮಾರಸ್ಯ, ನಿಷ್ಠೆ, ಗೌರವ, ಹೊಂದಾಣಿಕೆ ಸಹಕಾರ ಇರಬೇಕಾದುದು ಅತ್ಯಗತ್ಯವಾದುದು. ಲೈಂಗಿಕ ಅಪೇಕ್ಷೆಯ ಪೂರೈಕೆಯು ದಂಪತಿಗಳನ್ನು ಹತ್ತಿರ ತಂದರೆ ಸಂತಾನಫಲ, ಶಿಶುಗಳ ಪಾಲನೆ ಪೋಷಣೆ ಅವರಿಬ್ಬರ ದಾಂಪತ್ಯ ಜೀವನವನ್ನು ಶಾಶ್ವತಗೊಳಿಸುವುದರ ಜೊತೆಗೆ ಹೆಚ್ಚಿನ ಹೊಂದಾಣಿಕೆ ಹಾಗೂ ಸಹಕಾರಕ್ಕೆ ಹಾದಿ ಮಾಡುವುವು.

೮. **ವಿಧವಾ ವಿವಾಹ :** ಸಾಂಪ್ರದಾಯಿಕ ಹಾಗೂ ಸಮಾಜ ವ್ಯವಸ್ಥೆಯಲ್ಲಿ ವಿವಾಹವು ಒಂದು ಪವಿತ್ರವಾದ ಧಾರ್ಮಿಕ ಸಂಸ್ಕಾರವೆನಿಸಿರುವುದರಿಂದ ವಿವಾಹ ವಿಚ್ಛೇದನಕ್ಕೆ ಅವಕಾಶವಿಲ್ಲ. ವಿವಾಹದ ನಂತರ ದುರದೃಷ್ಟವಶಾತ್ ಪತಿ ಅಥವಾ ಪತ್ನಿ ಮರಣ ಹೊಂದಿದರೆ ಪುನಃ ವಿವಾಹವಾಗಲು ಅವಕಾಶವಿದ್ದುದಾದರೂ ಪತ್ನಿ ಮರುವಿವಾಹವಾಗುವಂತಿರಲಿಲ್ಲ. ಸ್ತ್ರೀಯ ವೈಧವ್ಯ ಅವಳ ಪೂರ್ವಜನ್ಮದ ಪಾಪದ ಫಲ ಆದ್ದರಿಂದ ಆಕೆಗೆ ಮರುವಿವಾಹವಿಲ್ಲ. ಆದರೆ ಪುರುಷ ವಿಧುರನಾದರೆ ಅವನು ಕೆಲವೇ ದಿನಗಳಲ್ಲಿ ಪುನರ್ವಿವಾಹ ಮಾಡಿ ಕೊಳ್ಳುವ ಹಕ್ಕು ಪಡೆದಿದ್ದಾನೆ! ಇಂತಹ ತಾರತಮ್ಯಗಳೇ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀ ಶೋಷಣೆಗೆ ಒಳಗಾಗಿದ್ದಾಳೆ ಎಂಬುದನ್ನು ಸಾಬೀತುಪಡಿಸುತ್ತವೆ. ಮನು, ಯಜ್ಞವಲ್ಕ್ಯ

ಮೊದಲಾದ ಸ್ಮೃತಿಕಾರರು ವಿಧವೆಯ ಪರಿಶುದ್ಧತೆಯ ಬಗ್ಗೆ ನೀತಿಸಂಹಿತೆ ನೀಡಿ ನಿರ್ಬಂಧಗಳನ್ನು ವಿಧಿಸಿದ್ದರು. ಕೌಟಿಲ್ಯ, ನಾರದ ಪರಮೇಶ್ವರ ಮೊದಲಾದವರು ತನ್ನ ಪತಿ ತಲೆಮರೆಸಿಕೊಂಡು ದೇಶಾಂತರ ಹೋಗಿದ್ದರೆ ಸನ್ಯಾಸ ಸ್ವೀಕರಿಸಿದ್ದರೆ, ನಪುಂಸಕನಾಗಿದ್ದರೆ, ಜಾತಿಭ್ರಷ್ಟನಾಗಿದ್ದರೆ, ಮರಣ ಹೊಂದಿದ್ದರೆ ಸ್ತ್ರೀ ಪುನಃ ವಿವಾಹವಾಗಬಹುದಾಗಿ ತಿಳಿಸಿದ್ದರೂ ವಾಸ್ತವಿಕವಾಗಿ ಶತಶತಮಾನಗಳವರೆಗೆ ವಿಧವಾವಿವಾಹ ನಿರ್ಬಧಿಲ್ಪಟ್ಟಿರುವುದನ್ನು ಗುರುತಿಸಬಹುದಾಗಿದೆ. ಸಹಗಮನ ಪದ್ಧತಿ ಅದರ ಪರಾಕಾಷ್ಠತೆಯನ್ನು ತೋರಿಸುತ್ತದೆ. ವಿಧವೆ ಕೇಶಮುಂಡನ ಮಾಡಿಕೊಂಡು, ಬಳೆ ಇಲ್ಲವೆ ಕೆಂಪು ವಸ್ತ್ರಧರಿಸಿ, ಕುಂಕುಮ, ಹೂ, ಬಳೆಗಳಿಲ್ಲದೆ ವಿಕಾರದಿಂದಿದ್ದು ಲೈಂಗಿಕ ಬಯಕೆಯನ್ನು ಹತ್ತಿಕ್ಕಲು ಹಾದಿಮಾಡಿರುವುದು ವಿಧವಾ ವಿವಾಹಕ್ಕೆ ಪ್ರಬಲ ವಿರೋಧವಿದ್ದುದನ್ನು ಸಾರಿಹೇಳುವುವು.[೩]

ರಾಜಾರಾಮ್ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ್ ಮೊದಲಾದ ಮಹಾನ್ ಸಮಾಜ ಸುಧಾರಕರ ಅವಿಶ್ರಾಂತ ಶ್ರಮದ ಫಲವಾಗಿ ಸಹಗಮನ ಪದ್ಧತಿ ನಿರ್ನಾಮವಾಯಿತು. ವಿಧವಾ ವಿವಾಹ ಆಚರಣೆಗೆ ಬಂದಿತು. ೧೮೨೯ರಲ್ಲಿ ಜಾರಿಗೆ ಬಂದ ಸಹಗಮನ ನಿಷೇಧ ಕಾಯಿದೆಯು ವಿಧವೆಯು ತನ್ನ ಮೃತನಾದ ಪತಿಯ ಚಿತೆಗೆ ಹಾರಿ ಪ್ರಾಣಾರ್ಪಣೆ ಮಾಡುವುದನ್ನು ಶಿಕ್ಷಾರ್ಹ ಅಪರಾಧವೆಂದು ಘೋಷಿಸಿದೆ. ೧೮೫೬ರ ಕಾಯಿದೆ ವಿಧವಾ ವಿವಾಹವನ್ನು ಮಾನ್ಯಮಾಡಿದೆ. ಇತ್ತೀಚಿನ ದಿನಗಳಲ್ಲಿ ವಿಧವಾ ವಿವಾಹಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿವೆ. ಚಿಕ್ಕ ವಯಸ್ಸಿನ, ಮಕ್ಕಳಿಲ್ಲದ, ಶ್ರೀಮಂತ ವಿಧವೆಯರು ವಿವಾಹ ವಾಗಲು ಅವಕಾಶಗಳು ದೊರೆಯುತ್ತಿವೆ. ಸುಶಿಕ್ಷಿತ ಪುರುಷರು, ಆದರ್ಶವಾದಿಗಳು, ಸಮಾಜಸುಧಾರಕರು ವಿಧವೆಯರನ್ನು ವರಿಸಲು ಮುಂದೆ ಬರುತ್ತಿದ್ದಾರೆ. ವಿಧವೆಯ ಬಗ್ಗೆ ಅಮಂಗಳ, ಅಪವಿತ್ರ ಎಂಬ ಕಲುಷಿತ ಭಾವನೆಯಿಂದ ನೋಡುವುದು ಕಡಿಮೆಯಾಗುತ್ತಿದೆ. ಜನರು ವೈಧವ್ಯದ ವಾಸ್ತವಿಕತೆಯನ್ನು ಅರ್ಥಮಾಡಿಕೊಂಡತ್ತೆಲ್ಲಾ ವಿಧವೆಯೂ ನೆಮ್ಮದಿಯುತ ಜೀವನವನ್ನು ಸಾಗಿಸಲು ಸೂಕ್ತ ವಾತಾವರಣ ನಿರ್ಮಾಣಗೊಳ್ಳುತ್ತಿದೆ.

ಯಾವುದೇ ಸಮಾಜದಲ್ಲಾಗಲೀ ಸ್ತ್ರೀ ಮತ್ತು ಪುರುಷರನ್ನು ಸಮಾಜ ಜೀವನದ ಎರಡು ಕಣ್ಣುಗಳೆಂದು ಪರಿಗಣಿಸಲಾಗುತ್ತದೆ. ಸ್ತ್ರೀಯರಿಗೆ ಕೊಟ್ಟಿರುವ ಸ್ಥಾನಮಾನಗಳ ಆಧಾರದ ಮೇಲಿಂದ ಒಂದು ಜನಾಂಗದ ಸಂಸ್ಕೃತಿಯ ಮಟ್ಟವನ್ನು ಅಳೆದು ತೋರಿಸಬಹುದಾಗಿದೆ. ಪ್ರತಿಯೊಂದು ದೇಶವು ಮಹಿಳೆಯನ್ನು ಬೇರೆ ಬೇರೆ ದೃಷ್ಟಿಕೋನಗಳಿಂದ ನೋಡುತ್ತ ಬಂದಿರುತ್ತದೆ. ಸಮಯ, ಪ್ರದೇಶ ಹಾಗೂ ಸಾಮಾಜಿಕ ಸ್ಥಿತಿಗತಿಗಳಿಗೆ ತಕ್ಕಂತೆ ಮಹಿಳೆಯನ್ನು ಕಾಣುವ ದೃಷ್ಟಿಕೋನದಲ್ಲಿಯೂ ಸಹ ಪರಿವರ್ತನೆಯನ್ನು ಕಾಣಬಹುದಾಗಿದೆ. ಒಂದಾನೊಂದು ಕಾಲದಲ್ಲಿ ಭಾರತೀಯರು ಸ್ತ್ರೀಯರನ್ನು ಮಾತೆಯೆಂದು, ಅಮೇರಿಕನ್ನರು ದೇವತೆಯೆಂದೂ, ಫ್ರೆಂಚರು ಪ್ರೇಯಸಿಯೆಂದು, ಜರ್ಮನಿಯರು ಮನೆಯೊಡತಿಯೆಂದು ಭಾವಿಸಿದ್ದರು.

ಆದರೆ ಇಂದಿನ ಸ್ಥಿತಿಗತಿಗಳು ಸಂಪೂರ್ಣವಾಗಿ ಪರಿವರ್ತನೆ ಹೊಂದಿವೆ. ಪ್ರಾಚೀನ ಕಾಲದಲ್ಲಿ ದೇವತೆ, ಮಾತೆಯೆಂದು ಗೌರವಾದರಗಳಿಂದ ಪೂಜಿಸಲ್ಪಟ್ಟ ಹಿಂದೂ ಮಹಿಳೆಯು, ಸ್ಮೃತಿಗಳ ಕಾಲದಲ್ಲಿ ಮತ್ತು ಮಧ್ಯ ಯುಗದಲ್ಲಿ ಸಾಕಷ್ಟು ತೊಂದರೆ ಮತ್ತು ಕಷ್ಟನಷ್ಟಗಳನ್ನು ಎದುರಿಸಬೇಕಾಯಿತು.

ಸ್ವಾತಂತ್ರ್ಯದ ನಂತರ ಮಹಿಳೆಯ ಸ್ಥಾನಮಾನಗಳಲ್ಲಿ ಸುಧಾರಣೆಗಳನ್ನು ಕಾಣಬಹುದು ಮುಲತಃ ಯಾವುದೇ ವ್ಯಕ್ತಿ ಪ್ರಬಲ ಅಥವಾ ದುರ್ಬಲನಲ್ಲ. ಅಂದರೆ ಹಿಂದೂ ಸಮಾಜದಲ್ಲಿ ಕೆಲವೊಂದು ಅಜ್ಞಾನಿಗಳು ಹಾಗೂ ಸಂಪ್ರದಾಯಪ್ರಿಯರು ಹೆಣ್ಣನ್ನು ಅಬಲೆ ಪೂರ್ವಾಚಾರ ಪ್ರೀಯಳು, ಪರತಂತ್ರಳು, ಮಂದಬುದ್ಧಿಯವಳು, ಚಂಚಲ ಸ್ವಭಾವದವಳು ಎಂಬ ಹಲವಾರು ಅಪವಾದಗಳನ್ನು ಅವಳಿಗೆ ಕೊಟ್ಟರು. ಇವೆಲ್ಲವುಗಳಿಂದ ಹಿಂದೂ ಮಹಿಳೆಯ ಜೀವನವು ಚಿಂತಾಜನಕವಾಯಿತು. ಮಧ್ಯಯುಗದ ಉತ್ತರಾರ್ಧ ಸಮಯದಿಂದ ಹಾಗೂ ಸ್ವಾತಂತ್ರ್ಯದ ನಂತರ ಪ್ರಗತಿಯ ವಿವಿಧ ಸಮಾಜಗಳಲ್ಲಿ ಸಮಾಜ ಸುಧಾರಕರು, ಸಮಾಜ ಕಾರ್ಯಕರ್ತರು, ಯೋಚಕರು ಹಾಗೂ ಅಧಿಕಾರಿಗಳು ಮಹಿಳೆಯ ಸಮಸ್ಯೆಗಳನ್ನು ನಿವಾರಣೆ ಮಾಡಲು ಪರಿಶ್ರಮ ಪಡುತ್ತಲಿದ್ದಾರೆ. ಸಮಸ್ಯೆಗಳಿರುವುದರಿಂದಲೇ, ಅವುಗಳ ನಿವಾರಣೆಗಾಗಿ ಪರಿಶ್ರಮಿಸಬೇಕಾಗುವುದು. ತೊಂದರೆಗಳು ನಿವಾರಣೆಯಾದಾಗ 'ಕಲ್ಯಾಣ', 'ಪ್ರಗತಿ' ಮತ್ತು ಏಳ್ಗೆಯನ್ನು ಸಾಧಿಸಿದಂತಾಗುತ್ತದೆ. ವೇದ ಕಾಲದಲ್ಲಿ ದೇವತೆಯೆಂದು ಮನ್ನಿಸಲ್ಪಟ್ಟ ಹಿಂದೂ ಮಹಿಳೆಯು ಮಧ್ಯ ಯುಗದಲ್ಲಿ ಪುರುಷನ ಕೈಗೊಂಬೆ, ಆತನ ಉಪಭೋಗದ ವಸ್ತು, ಪರಾವಲಂಬಿ ಅಬಲೆ ಮಂದಬಬುದ್ಧಿಯವಳು, ಹೆರಿಗೆಯಂತ್ರ, ಅಡುಗೆ ಮನೆಯ ದಾಸಿ, ಪೂರ್ವಾಚಾರ ಪ್ರೀಯಳು, ಅಶಿಕ್ಷಿತಳು, ಅನಾಗರಿಕಳು, ಮಾಯಾವಿನಿ, ಮಾಟಗಾರ್ತಿ, ದಾಸಿ ಮತ್ತು ಕಿಂತರಳಾಗಿ ಸಾಕಷ್ಟು ಅನ್ಯಾಯ ಮತ್ತು ಅನಾಹುತಗಳನ್ನು ಅವಳು ಅನುಭವಿಸಿದ್ದು ಹಿಂದೂ ಸಮಾಜಕ್ಕೆ ಕಳಂಕಪ್ರಾಯವೆಂದು ಅತಿಶ್ರೇಷ್ಠ, ಪವಿತ್ರ ಮತ್ತು ಉನ್ನತವಾದುದೆಂದು ಹೊಗಳಲ್ಪಟ್ಟ ಹಿಂದೂ ಸಂಸ್ಕೃತಿಯು ಸ್ತ್ರೀ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕಸಿದುಕೊಂಡು ಬಹುಸಂಖ್ಯಾತ ಪಾಶ್ಚಿಮಾತ್ಯರಿಂದ ನಿಂದೆಗೆ ಹಾಗೂ ಅವಹೇಳನಕ್ಕೆ ಗುರಿಯಾಯಿತು.

'ಒಲೆಗೆ ಹೆಣ್ಣು ಹೊಲಕ್ಕೆ ಗಂಡು'' ಮಗಳು ಕುಟುಂಬಕ್ಕೆ ಸೇರಿದವಳಲ್ಲ. 'ಹೆಂಗಸಿನ ಬುದ್ಧಿ ಮೊಳಕಾಲು ಕೆಳಗೆ', 'ಸ್ತ್ರೀ ಬುದ್ಧಿ ಪುಳಯಾಂತಕ', ಗಂಡು ಕುಳಿತು ಕೆಟ್ಟ, ಹೆಣ್ಣು ತಿರುಗಿ ಕೆಟ್ಟಳು, 'ಎತ್ತ ಬಂದತ್ತ ತಿರುಗುವ ಸತಿ ಹೊಲ್ಲ' ಇಂತಹ ಹಲವು ಪೂರ್ವಾಗ್ರಹ ಪೀಡೆಗಳ ಆಧಾರದ ಮೇಲಿಂದ ಮಧ್ಯಯುಗದಲ್ಲಿ ಹಿಂದೂ ಸಮಾಜವು ಮಹಿಳೆಗೆ ಸಾಕಷ್ಟು ತೊಂದರೆಗಳನ್ನು ಒದಗಿಸಿಕೊಟ್ಟಿತು. ಆಗಿನ ವಿಚಾರವಂತರ ಪ್ರಕಾರ ಕುಟುಂಬದಲ್ಲಿ ಹೆಣ್ಣು ಮಕ್ಕಳು ಅಡವಿಟ್ಟುಕೊಂಡ ಆಭರಣದಂತೆ, ಮಾಲಿಕನು ಬಂದು ಕೇಳಿದಾಗ ಅದನ್ನು ವಾಪಸ್ಸು ಕೊಡಲೇಬೇಕು. ಹೆಣ್ಣು ಮತ್ತೊಬ್ಬರ ಮನೆಯ ಸೊತ್ತು ಎನ್ನುವ

ನಂಬಿಕೆ ಅವರಲ್ಲಿದ್ದುದರಿಂದಲೇ ಬಹುಶಃ ಅವಳಿಗೆ ಉನ್ನತ ಶಿಕ್ಷಣವನ್ನು ವ್ಯವಹಾರ ಜ್ಞಾನವನ್ನು ಕೊಡಲು ತಂದೆ-ತಾಯಿಗಳು ಅಷ್ಟೊಂದು ಆಸಕ್ತಿಯನ್ನು ತೋರಿಸುತ್ತಿರಲಿಕ್ಕಿಲ್ಲವೆಂದು ಊಹಿಸಲಾಗಿದೆ. ಸಾಮಾನ್ಯವಾಗಿ ಹೆಣ್ಣು ಮಗು ಹುಟ್ಟಿದಾಗ ಎದೆ ಎದೆಗಟ್ಟಿಸಿಕೊಂಡು ಅಳುವವರೇ ಹೆಚ್ಚು ವಿನಃ ಸಂತಸ ಪಡುವವರು ಬಹುವಿರಳವೆಂದು ಹೇಳಬಹುದು. 'ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ', 'ಹೆಣ್ಣು ಹಡೆಯಬ್ಯಾಡ ಹೆರವರಿಗೆ ಕೊಡಬೇಡ ಹೆಣ್ಣು ಹೋಗುವಾಗ ಅಳಬೇಡ' ಮುಂತಾದ ಜನಪದ ಮುಕ್ತಕಗಳು ಹೆಣ್ಣಿನ ಬಗೆಗೆ ಭಾರತೀಯರ ಮನೋಭಾವನೆಗಳನ್ನು ಅಭಿವ್ಯಕ್ತಗೊಳಿಸುತ್ತವೆ.[೪]

ಹಿಂದೂ ಅವಿಭಕ್ತ ಕುಟುಂಬದ ನಿಯಮದ ಪ್ರಕಾರ ಮಹಿಳೆಯರು ತಮ್ಮ ಪಾಲಕರ ಮನೆಯಲ್ಲಿ ಅತಿಥಿಗಳಂತೆ ವಾಸವಾಗಿರುತ್ತಾರೆ. ಯಾಸಕನ ಅಭಿಪ್ರಾಯದಂತೆ 'ಸ್ತ್ರೀದಾನ ಅತಿ ಶ್ರೇಷ್ಠದಾನ ಆದರೆ ಪುರುಷದಾನ ಅತೀ ಹೀನದಾನ'. ಮಹಾಭಾರತದಲ್ಲಿ ಕುರಕುಲ ಪಿತಾಮಹನೆಂದು ಎಲ್ಲರಿಂದಲೂ ಹೊಗಳಿಸಿಕೊಳ್ಳುವ ಭೀಷ್ಮ ಪಿತಾಮಹರು ಸ್ತ್ರೀ ಸ್ವಭಾವದ ಬಗೆಗೆ ಯುದಿಷ್ಠರನಿಗೆ "ಸ್ತ್ರೀಯು ಹೆಚ್ಚಿನ ಬಲ ಮತ್ತು ಶಕ್ತಿಯನ್ನು ಪಡೆದಿದ್ದರೂ ಅವಳೊಬ್ಬ ಮಾಟಗಾರ್ತಿ. ಆದ್ದರಿಂದ ಅವಳನ್ನು ಯಾವಾಗಲು ಪುರುಷನ ಸಂರಕ್ಷಣೆಯಲ್ಲಿಯೇ ಇಡಬೇಕು" ಎಂದು ಹೇಳಿರುತ್ತಾರೆ.

ಈ ಮೇಲಿನ ಹಲವಾರು ರೀತಿಯ ಭಿನ್ನಭಿಪ್ರಾಯಗಳಿಗೆ ಕಾರಣರಾರು? ಸ್ವಭಾವತ ಸ್ತ್ರೀಯು ಅಬಲೆಯೇ? ಅಥವಾ ಸಮಾಜವೇ ಅವಳನ್ನು ಅಬಲೆಯನ್ನಾಗಿ ಮಾಡಿದಿಯೇ? ದೇಹದ ಎರಡು ಕಣ್ಣುಗಳಂತೆ ಸ್ತ್ರೀ-ಪುರುಷರಿರುವಾಗ ಯಾವ ಕಣ್ಣು ಶ್ರೇಷ್ಠವೆಂದು ವಾದಿಸುವುದು ನಮ್ಮ ಮೂರ್ಖತನವಲ್ಲವೇ? ಸೃಷ್ಠಿಯ ಉಗಮದಿಂದಲೂ ಸ್ತ್ರೀಯು ದುರ್ಬಲಳಲ್ಲ, ಮಂದಬುದ್ಧಿಯವಳಲ್ಲ, ಪಾರತಂತ್ರಗಳಲ್ಲ, ಮಾದುವಿನಿಯಲ್ಲಿ ಆದರೆ ಅವಳನ್ನು ಈ ರೀತಿಯ ಕೆಳದರ್ಜೆಯ ಭಾವನೆಗಳಿಂದ ಕೂಡಿರುವುದು ಸಮಾಜದ ಅಥವಾ ಜನರ ತಪ್ಪೇ ವಿನಃ ಹೆಣ್ಣಾಗಿ ಹುಟ್ಟಿದು ಅವಳ ತಪ್ಪಲ್ಲ ಏಕೆಂದರೆ ಒಂದಾನೊಂದು ಕಾಲದಲ್ಲಿ ಶ್ರೇಷ್ಠಳೆಂದು ಹೊಗಳಿಸಿಕೊಂಡಿರುವ ಹೆಣ್ಣು ಮುಂದೆ ಅತೀ ಕೆಳದರ್ಜೆಯವಳಾಗಿ ಏಕೆ ಕಂಡಿದ್ದಾಳೆ? ಅದೇ ಪಾಶ್ಚಿಮಾತ್ಯ ಸಮಾಜಗಳಲ್ಲಿ ಸರಿಸಮಾನಳೆಂದು ಪರಿಗಣಿಸಲ್ಪಟ್ಟ ಮಹಿಳೆಯು ನಮ್ಮ ದೇಶದಲ್ಲಿಯೇ ಮಾತ್ರ ಅದೇಕೆ ಅಬಲಳು ಹಾಗೂ ಪರಾವಲಂಬಿಯೆಂದು ಪರಿಗಣಿಸಲ್ಪಡಬೇಕು? ಇವೆಲ್ಲವುಗಳಿಗೆ ಪ್ರಮುಖ ಮೂಲ ಕಾರಣವೆಂದರೆ ಹೆಣ್ಣಿನ ಬಗೆಗೆ ಸಮಾಜವು ಬೆಳೆಸಿಕೊಂಡು ಬಂದ ನಿಮ್ನ ಭಾವನೆ ಮತ್ತು ತಪ್ಪು ಗ್ರಹಿಕೆಗಳೇ ವಿನಃ ಮೂಲಗುಣ ಸ್ವಭಾವಗಳಲ್ಲ. ಸಮಾಜದ ಕಣ್ಣು, ಕುಟುಂಬದ ಕಿರೀಟ, ಗೃಹಿಣಿ, ಗೃಹದೇವತೆ, ಸಹಧರ್ಮಿಣಿ ಎಂದು ಅನೇಕ ದಾರ್ಶನಿಕರು ಮಹಿಳೆಯನ್ನು ಕುರಿತು ಹೊಗಳಿದ್ದಾರೆ, ಕೊಂಡಾಡಿದ್ದಾರೆ.

ಹೆಣ್ಣು ಮಾನವ ಸಂತತಿಯ ತಾಯಿ, ವಿವಿಧ ತಲೆಮಾರುಗಳನ್ನು ಬೆಸೆಯುವ ಜೀವಂತ ಸೇತುವೆ ಹಿಂದೂ ಸಮಾಜವು ಅವಳಿಗೆ ಅತೀ ಶ್ರೇಷ್ಠ ಸ್ಥಾನಮಾನಗಳನ್ನು ಕಲ್ಪಿಸಿಕೊಟ್ಟಿದೆ ಆದುದರಿಂದಲೇ ಹಿಂದೂ ದೇಶವನ್ನು ಭಾರತಾಂಬೆ ಮತ್ತು ಭಾರತಮಾತೆಯೆಂದು ಕರೆಯುತ್ತೇವೆ. ಮಹಿಳೆಯ ಪ್ರೀತಿ, ಪ್ರೇಮ, ವಾಸಲ್ಯ, ತ್ಯಾಗ, ಅನುಕಂಪ ಹಾಗೂ ಸೌಹರ್ದತೆಗಳನ್ನು ಜ್ಞಾಪಿಸಿಕೊಂಡೇ ಈ ಹೆಸರುಗಳನ್ನು ಕೊಡಲಾಗಿದೆ. ದಿವಾಂಗತ ಜವಾಹರಲಾಲ್ ನೆಹರೂರವರು "ಜನರನ್ನು ಜಾಗೃತಿಗೊಳಿಸುವುದಕ್ಕಿಂತಲೂ ಮೊದಲು ಮಹಿಳೆಯರನ್ನು ಜಾಗೃತಗೊಳಿಸಬೇಕು. ಒಂದು ಸಲ ಅವಳು ಚಲಿಸಲು ಪ್ರಾರಂಭಿಸಿದರೆ, ಅವಳೊಂದಿಗೆ ಕುಟುಂಬವೂ ಚಲಿಸುತ್ತದೆ, ಗ್ರಾಮವೂ ಚಲಿಸುತ್ತದೆ, ಕೊನೆಗೆ ಇಡೀ ದೇಶವೇ ಚಲಿಸುತ್ತದೆ." ಎಂದು ಮಹಿಳಾ ಕಲ್ಯಾಣದ ಅವಶ್ಯಕತೆಯನ್ನು ಅಭಿವ್ಯಕ್ತಗೊಳಿಸಿರುತ್ತಾರೆ. ಸ್ವಭಾವತಃ ಹೆಣ್ಣು ಅಬಲೆಯಲ್ಲ, ದುರ್ಬಲಳಲ್ಲ, ಮನೋವಿಜ್ಞಾನಿಗಳು ಸ್ತ್ರೀ ಪುರುಷರಲ್ಲಿ ಗ್ರಹಣಶಕ್ತಿ, ನೆನಪಿನಶಕ್ತಿ, ವಿಚಾರಶಕ್ತಿ ಹಾಗೂ ಮೆದುಳಿನ ರಚನೆ ಒಂದೇ ರೀತಿಯಾಗಿರುತ್ತದೆಯೆಂದು ಅವರು ಹೇಳಿರುತ್ತಾರೆ. ಮಾನವ ಶಾಸ್ತ್ರಜ್ಞರು ಕೂಡಾ ವ್ಯಕ್ತಿತ್ವವನ್ನು ಸಂಸ್ಕೃತಿಯ ಕೊಡುಗೆ ಎಂದು ಅವರು ಹೇಳಿದ್ದಾರೆ. ಸ್ತ್ರೀಯರು ಪರಾವಲಂಬಿ ಹಾಗೂ ಅಬಲೆಯಾಗಿ ಕಂಡುಬರುವರು.

ಸಂಸ್ಕೃತಿಯ ಪ್ರಭಾವದಿಂದ ಕೆಲವೊಂದು ಆದಿವಾಸಿಗಳಲ್ಲಿ ಸ್ತ್ರೀಯರೇ ಪ್ರಬಲ ಮತ್ತು ಸದೃಢವಾಗಿರುವುದರಿಂದ ಅವರೇ ಬೇಟೆಗೆ ಹೋಗುತ್ತಾರೆ. ಪುರುಷರು ಮನೆಯ ಮಕ್ಕಳ ಲಾಲನೆ-ಪೋಷಣೆಯಲ್ಲಿ ತೊಡಗಿರುತ್ತಾರೆ. ಸೃಷ್ಟಿಯ ಉಗಮದಿಂದಲೂ ಸ್ತ್ರೀ ಪುರುಷರೀರ್ವರೂ ಸರಿಸಮಾನರು. ಕಾರಣಗಳನ್ನೂ ಹಾಗೂ ಸಾಮಾಜಿಕ ನ್ಯಾಯವನ್ನೂ ಕೊಡುವುದು ಸ್ತುತ್ಯ ಮತ್ತು ಸ್ವಾಗತಾರ್ಹವಾಗಿದೆ. ಭಾರತೀಯ ಮಹಿಳೆಯರು ೧೭-೧೮ ಮತ್ತು ೧೯ನೇ ಶತಮಾನಗಳಲ್ಲಿ ಅಸಂಖ್ಯಾತ ತೊಂದರೆ ಮತ್ತು ಸಮಸ್ಯೆಗಳನ್ನು ಎದುರಿಸಿದ್ದಾರೆ. ಶಿಶುಹತ್ಯೆ, ಬಾಲ್ಯವಿವಾಹ, ನಗ್ನಿಕಾವಿವಾಹ, ವಿಧವಾ ಮರುವಿವಾಹದ ಮೇಲೆ ನಿರ್ಬಂಧನೆ ಸತಿಸಹಗಮನ, ವರದಕ್ಷಿಣೆ, ಬಹುಪತ್ನಿತ್ವ, ದೇವದಾಸಿ ಪದ್ಧತಿ, ಬುರ್ಖಾಪದ್ಧತಿ ಮುಂತಾದ ಸಾಮಾಜಿಕ ಸಮಸ್ಯೆಗಳು ಮಧ್ಯ ಯುಗದಲ್ಲಿ ಮಹಿಳೆಯರ ಜೀವನವನ್ನೇ ಜರ್ಜಿತಗೊಳಿಸಿದವು. ಉಳಿದ ಪಾಶ್ಚಿಮಾತ್ಯ ರಾಷ್ಟ್ರಗಳೊಡನೆ ಹೋಲಿಸಿ ನೋಡಿದಾಗ ಭಾರತೀಯ ನಾರಿಯರ ಸ್ಥಾನಮಾನಗಳು ಬಹಳ ಶೋಚನೀಯವಾಗಿದ್ದವೆಂದು ಹೇಳಬಹುದು. ೧೮ನೇ ಶತಮಾನದಲ್ಲಿ ಕೆಲವೊಂದು ಸಮಾಜ ಸುಧಾರಕರು ಸ್ತ್ರೀಯರ ಸ್ಥಾನಮಾನಗಳ ಸುಧಾರಣೆಗಾಗಿ ಬೇರೆ ಬೇರೆ ಕ್ರಮಗಳನ್ನು ಜಾರಿಯಲ್ಲಿ ತಂದರು. ಸ್ವಾತಂತ್ರ್ಯದ ನಂತರ ಸಮಾನತೆ, ವ್ಯಕ್ತಿ ಸ್ವಾತಂತ್ರ ಮತ್ತು ಪ್ರಜಾಪ್ರಭುತ್ವದ ರೂಪರೇಷೆಗಳಿಗೆ ತಕ್ಕಂತೆ ಮಹಿಳಾ ಕಲ್ಯಾಣ ಕಾರ್ಯಕ್ರಮಗಳನ್ನು ಮುಂದುವರಿಸಿಕೊಂಡು ಬರಲಾಗಿದೆ. ಪ್ರಗತಿ ಪಥದೆಡೆಗೆ ಮುನ್ನಡೆಯುತ್ತಲಿರುವ ಭಾರತದಲ್ಲಿ ಮಹಿಳಾ ಕಲ್ಯಾಣ ಕಾರ್ಯಕ್ರಮಗಳು ಮಾನವೀಯತೆ, ಅನುಕಂಪ ಹಾಗೂ ಸಾಮಾಜಿಕ ನ್ಯಾಯಗಳ ಮೇಲೆ ರಚಿಸಲ್ಪಟ್ಟಿರುತ್ತದೆ.

ಮಧ್ಯಯುಗದಿಂದ ಇಂದಿನವರೆಗೂ ಭಾರತೀಯ ಮಹಿಳೆಯರು ಅಸಂಖ್ಯಾತ ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತ ಬಂದಿರುತ್ತಾರೆ. ಇಂದು ಸಹ ಸಮಾಜದಲ್ಲಿ ಪುರುಷನಷ್ಟೇ ಸರಿಸಮಾನವಾದ ಸ್ಥಾನಮಾನಗಳನ್ನು ಮಹಿಳೆಗೆ ಕಲ್ಪಿಸಿಕೊಟ್ಟಿಲ್ಲ. ಮಹಿಳೆಯ ಸ್ಥಾನಮಾನಗಳ ಸುಧಾರಣೆಗಾಗಿ ಎಂದಿನಿಂದಲೂ ಪ್ರಯತ್ನಗಳು ನಡೆಯುತ್ತಲೇ ಬಂದಿವೆ. ೧೨ನೇ ಶತಮಾನದಲ್ಲಿ ಕಲ್ಯಾಣದ ಶಿವಶರಣರು "ಮೊಲೆ ಮೂಡಿ ಬಂದರೆ ಹೆಣ್ಣೆಂಬರು, ಗಡ್ಡ ಮೀಸೆ ಬಂದರೆ ಗಂಡೆಂಬರು, ಒಳಗೆ ಸುಳಿಯುವ ಆತ್ಮ ಹೆಣ್ಣು ಅಲ್ಲ ಗಂಡೂ ಅಲ್ಲವೆಂದೂ ಲಿಂಗ ಭೇದವನ್ನು ತೊಡೆದು ಹಾಕಲು ಪ್ರಯತ್ನಿಸಿದರು." "ಹೆಣ್ಣು ಹೆಣ್ಣಲ್ಲ ಹೆಣ್ಣು ರಕ್ಕಸಿಯಲ್ಲ, ಹೆಣ್ಣು ಸಾಕ್ಷಾತ್ ಕಪಿಲಸಿದ ಮಲ್ಲಿಕಾರ್ಜುನ" ಎಂದು ಹೆಣ್ಣಿನ ಹಿರಿಮೆಯನ್ನು ಕೊಂಡಾಡಿದರು. ನೀಲಾಂಬಿಕೆ, ಗಂಗಾಂಬಿಕೆ, ಅಕ್ಕಮಹಾದೇವಿ ಮುಂತಾದ ಶಿವಶರಣೆಯರು ಶಿವನುಭವ ಚರ್ಚಾಗೋಷ್ಠಿಯಲ್ಲಿ ಸ್ವ-ಸಂತೋಷದಿಂಧ ಭಾಗವಹಿಸುತ್ತಿದ್ದರು. ಆದರೆ ಶರಣರ ನಂತರ ಮತ್ತೆ ಮಹಿಳಾ ಕಲ್ಯಾಣ ಕಾಲುಕಸವಾಯಿತು. ಅದೇ ಅವಧಿಯಲ್ಲಿಯೇ ಬಿಜ್ಜಳ ಕೌಶಿಕನಂಥ ಕೆಲವೊಂದು ರಾಜ ಮಹಾರಾಜರು ಸ್ತ್ರೀ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಉಲ್ಲಂಘಿಸಿದ್ದರು. ಹಿಂದಿನ ಕಾಲದಲ್ಲಿ ಮಹಿಳೆಯು ಬದುಕಿನ ಪರ್ಯಾಂತರವೂ ಪರಾವಲಂಬಿಯಾಗಿ ಜೀವನ ಸಾಗಿಸಬೇಕಾಗುತ್ತಿತ್ತು. ಪಿತೃ ಪ್ರಧಾನವಾದ ಹಿಂದೂ ಸಮಾಜದಲ್ಲಿ ಹೆಣ್ಣನ್ನು ಪರಕೀಯಳಂತೆ ಕಾಣುವ ಮನೋಭಾವನೆ ಎಂದಿನಿಂದಲೂ ನಮ್ಮಲ್ಲಿ ರಕ್ತಗತವಾಗಿ ಬಂದಿರುತ್ತದೆ.

ಮಹಿಳೆಗೆ ಶಿಕ್ಷಣವನ್ನು ಕೊಡುವುದರಿಂದ ಏನು ಲಾಭವಿದೆ? ಎಂದು ಲೆಕ್ಕ ಹಾಕುವ ಕನ್ಯಾಪಿತೃಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಮಧ್ಯಯುಗದಲ್ಲಿ ಆದಷ್ಟು ಶೀಘ್ರದಲ್ಲಿಯೇ ಮಗಳ ಮದುವೆಯಾಗಿಸುವಂತೆ ಸಮಾಜದ ಜನರು ಕನ್ಯಾ ಪಿತೃಗಳ ಮೇಲೆ ನಿರ್ಬಂಧನೆಗಳನ್ನು ವಿಧಿಸುತ್ತಿದ್ದರು. ಬಾಲ್ಯವಿವಾಹ ಮತ್ತು ನಗ್ನಿಕಾ ವಿವಾಹಗಳಿಂದ ಸಮಾಜದಲ್ಲಿ ವಿಧವೆಯರ ಸಂಖ್ಯೆಯೂ ಹೆಚ್ಚು ಹೆಚ್ಚಾಯಿತು. ಎಷ್ಟೋ ಜನ ಮುಗ್ಧ ಹೆಣ್ಣುಮಕ್ಕಳು ಶೈಶವಾವಸ್ಥೆಯಲ್ಲಿಯೇ ತಮ್ಮ ಪತಿಯನ್ನು ಕಳೆದುಕೊಂಡು ವಿಧವೆಯರಾದರು. ಬಾಲ್ಯವಿವಾಹಕ್ಕೆ ಪ್ರಚೋದನೆ ಇರುವಂತೆ ವಿಧವಾ ಮರುವಿವಾಹಕ್ಕೆ ನಿರ್ಬಂಧನೆ ಇದ್ದುದು ಹೆಣ್ಣಿನ ಮತ್ತೊಂದು ದುರದೃಷ್ಟವೆಂದು ಹೇಳಬಹುದು. ಮದ್ಯಮಯುಗದಲ್ಲಿ ಬಾಲ್ಯಾವಸ್ಥೆಯಲ್ಲಿಯೇ ಪತಿಯನ್ನು ಕಳೆದುಕೊಂಡ ಹೆಣ್ಣು ಬದುಕಿನ ಪರ್ಯಾತರವೂ ತನ್ನ ಗತಿಸಿ ಹೋದ ಪತಿಯ ಹೆಸರಿನಿಂದಲೇ ಅವನ ಸ್ಮರಣೆಯಲ್ಲಿಯೇ ಬದುಕಬೇಕಾಗುತ್ತಿತ್ತು. ಇಲ್ಲವೇ ಸಹಗಮನ ಪದ್ಧತಿಯನ್ನು ಅನುಸರಿಸಬೇಕಾಗುತ್ತಿತ್ತು.

ಕುಟುಂಬದ ಕ್ಷೇತ್ರವನ್ನು ಬಿಟ್ಟು ಹೊರಗಡೆ ಸ್ವತಂತ್ರವಾದ ಜೀವನವನ್ನು ಸಾಗಿಸಲು ಇಂದಿನಂತೆ ಆಗಿನ ಕಾಲದಲ್ಲಿ ಸ್ವಾತಂತ್ರ ಉಪಜೀವನ ಮಾರ್ಗಗಳಿರಲಿಲ್ಲ. ಪತಿಯಿಂದ ತುಚ್ಛೀರಿಸಲ್ಪಟ್ಟ ಹೆಣ್ಣು ನೇರವಾಗಿ ತನ್ನ ತಂದೆ-ತಾಯಿಗಳ ಮನೆಗೆ ಬರಬೇಕು. ಅವರಿನ್ನೂ ಜೀವಂತರಾಗಿದ್ದರೆ, ಆ ಹೆಣ್ಣು

ಸುದೈವಿ; ಒಂದು ವೇಳೆ ಅವರು ಆಗಲೇ ತಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಿದ್ದರೆ, ಅಣ್ಣ-ತಮ್ಮಂದಿರ ಆಶ್ರಯದಲ್ಲಿ ಅವರು ಹೇಳಿದಂತೆ ಕೇಳಿಕೊಂಡು ದಾಸಿಯಾಗಿ, ಕಿಂಕರಳಾಗಿ ಬಿದ್ದಿರುವುದು ಅನಿವಾರ್ಯ. ಹೆಣ್ಣು ಬೀದಿಯ ಭಿಕಾರಿಯಾಗಿ, ವೇಶ್ಯೆಯಾಗಿ ತನ್ನ ಜೀವನವನ್ನು ಸಾಗಿಸಬೇಕಾಗುತ್ತಿತ್ತು. ಇಂದು ಔದ್ಯೋಗಿಕ ಕ್ರಾಂತಿ ಹಾಗೂ ಶೈಕ್ಷಣಿಕ ಪ್ರಗತಿಯಿಂದ ಮಹಿಳಾ ಸಮಸ್ಯಗಳು ನಿವಾರಣೆಯಾಗುತ್ತಲಿದ್ದರೂ ಇನ್ನೂಳಿದ ಉಪಸಮಸ್ಯೆಗಳು ಹೆಚ್ಚುತ್ತಲಿವೆಯೆಂದು ಕೆಲವೊಂದು ಸಮಾಜ ವಿಜ್ಞಾನಿಗಳು ಹೇಳುತ್ತಾರೆ. ಬಹುಸಂಖ್ಯಾತ ಮಹಿಳೆಯರು ಫ್ಯಾಕ್ಟರಿ, ಮಿಲ್ಲು ಹಾಗೂ ಇನ್ನಿತರ ವಿಭಾಗಗಳಲ್ಲಿ ದುಡಿಯುತ್ತಲಿರುವುದರಿಂದ ಮಕ್ಕಳ ಪಾಲನೆ-ಪೋಷಣೆ, ಸಂಸಾರ ನಿರ್ವಹಣೆಗಳ ಕಡೆಗೆ ಅವರಿಗೆ ವಿಶೇಷ ಗಮನವನ್ನು ಕೊಡುವುದು ಸಾಧ್ಯವಾಗುತ್ತಿಲ್ಲ. ತಂದೆ-ತಾಯಿಂದಿರ ಮಾರ್ಗದರ್ಶನವಿಲ್ಲದ ಮಕ್ಕಳೂ ಕೆಟ್ಟ ಮಾರ್ಗಕ್ಕೆ ಇಳಿಯಲು ಸಾಧ್ಯತೆಗಳು ಕೂಡ ಮಾಧ್ಯಮಿಕ ಸ್ವರೂಪವನ್ನೇ ತಾಳುತ್ತಿವೆ. ಇದರಿಂದ ಭಗ್ನ ಕುಟುಂಬಗಳ ನಿರುತ್ಸಾಹ, ದಾಂಪತ್ಯ ಜೀವನ ಹಾಗೂ ವಿವಾಹ ವಿಚ್ಛೇದನಗಳ ಸಂಖ್ಯೆಯೂ ಹೆಚ್ಚುತ್ತಾ ನಡೆದಿದೆ. ಕೆಲವೊಂದು ಸಲ ಸಾರ್ವಜನಿಕ ಕ್ಷೇತ್ರದಲ್ಲಿ ಸೇವೆ ಸಲ್ಲಿಸಲು ಮಹಿಳೆಯರೂ ಸಾಕಷ್ಟು ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಅವಳು ನಾನಾ ಭಾವನೆಗಳುಳ್ಳ ಪುರುಷರ ವಕ್ರದೃಷ್ಟಿ, ಕುಚೋದ್ಯತನ, ಪರಿಹಾಸ್ಯ ಮತ್ತು ಅಪವಾದಗಳನ್ನು ಎದುರಿಸುತ್ತ ಅವಳು ಕಾರ್ಯ ಮಾಡಬೇಕಾಗುತ್ತದೆ. ಕೆಲವೊಂದು ಸಲ ಅವಳ ಶೀಲಕ್ಕೆ ಭಂಗ ಬರುವ ಪ್ರಸಂಗಗಳೂ ಸಹ ಬರುವ ಸಾಧ್ಯತೆಗಳಿರುತ್ತವೆ. ಸ್ತ್ರೀಯರ ಆರ್ಥಿಕ ಸ್ವಾವಲಂಬನದ ಇನ್ನೊಂದು ಪ್ರತಿಕೂಲವೆಂದರೆ, ಬಹುಸಂಖ್ಯಾತ ಮಹಿಳೆಯರು ತಮ್ಮ ಮೂಲ ಕುಟಂಬವನ್ನು ತೊರೆದು ನಗರ ಪ್ರದೇಶಗಳಿಗೆ ವಲಸೆ ಬರುತ್ತಲಿರುವುದು, ಇದರಿಂದ ಗ್ರಾಮೀಣ ಪ್ರದೇಶಗಳಲ್ಲಿಯ ಅವಿಭಕ್ತ ಕುಟುಂಬಗಳೂ ಒಡೆದು ವಿಭಕ್ತ ಕುಟುಂಬಗಳ ಸಂಖ್ಯೆಯು ಹೆಚ್ಚುತ್ತಾ ನಡೆದಿದೆ. ಅದರೊಂದಿಗೆ ಹಿಂದೂ ಕುಟುಂಬದಲ್ಲಿರುವ ಕೆಲವೊಂದು ಸಾಮಾಜಿಕ ಸದ್ಗುಣಗಳು(social virtwes) ಹಾಗೂ ಜೀವನ ಮೌಲ್ಯಗಳು ನಾಶವಾಗುತ್ತಲಿವೆ. ಕೆಲವೊಂದು ಮಹಿಳೆಯರು ಸ್ವತಂತ್ರ ಜೀವನವನ್ನು ಸ್ವೇಚ್ಛಾ "ಕತ್ತಲೆಯಲ್ಲಿ ಬೆಳಕು ಬೆಳಗುತ್ತದೆ. ಸಾವಿನ ಮಧ್ಯದಲ್ಲಿ ಜೀವ ಬದುಕಲು ಹಂಬಲಿಸುತ್ತದೆ" ಜೀವನವನ್ನಾಗಿ ಪರಿವರ್ತಿಸಿ ಕೊಂಡು ಸಾಮಾಜಿಕ ಮೌಲ್ಯಗಳನ್ನೇ ಗಾಳಿಲ್ಲಿ ತೂರಿಬಿಟ್ಟಿರುತ್ತಾರೆ. ಸಂಪ್ರದಾಯ ರೀತ-ನೀತಿಗಳಿಂದ ನಿರ್ದೇಶಿಲಸಲ್ಪಡುವ ಹಿಂದೂ ಸಮಾಜದಲ್ಲಿ ಮಹಿಳೆಗೆ ತಾನು ಸಂಪೂರ್ಣ ಸ್ವತಂತ್ರಳು ಎನ್ನುವ ಭಾವನೆ ಕೆಲವೊಂದು ಮಹಿಳೆಗೆ ತಾನು ಪ್ರಗತಿಯನ್ನೇ ಕುಂಠಿತಗೊಳಿಸಬಹುದು. ಜೀವನದ ವಿವಿಧ ಕ್ಷೇತ್ರಗಳಲ್ಲಿಯೂ ಮಹಿಳೆಗೆ ಸ್ವಾತಂತ್ರ್ಯವನ್ನು ಕಲ್ಪಿಸಿ ಕೊಟ್ಟಿದ್ದರೂ ನಮ್ಮ ದೇಶದಲ್ಲಿ ಇನ್ನು ಆ ಜಾಗೃತಿ ಕಂಡುಬರುತ್ತಿಲ್ಲವೆಂದೇ ಹೇಳಬಹುದು. ಅನೇಕ ಸ್ತ್ರೀಯರಿಗೆ ತಮ್ಮ ಹಕ್ಕು ಬಾಧ್ಯತೆಗಳನ್ನು ಸದುಪಯೋಗಪಡಿಸಿಕೊಳ್ಳುವಲ್ಲಿ ಸಂಪ್ರದಾಯ ಪ್ರೀಯ ಸಮಾಜವು ಅಡ್ಡಗಾಲಾಗಿರುತ್ತದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಪುರುಷರ ಸಂಖ್ಯೆಯಷ್ಟೇ ಮಹಿಳೆಯರ ಸಂಖ್ಯೆ

ಇನ್ನೂ ಕಂಡುಬರುತ್ತಿಲ್ಲ. ರಾಜಕೀಯ ಕ್ಷೇತ್ರಗಳಲ್ಲಿಯೂ ಮಹಿಳೆಯರ ಸಂಖ್ಯೆಯು ಬಹಳ ಕಡಿಮೆಯಿರುವುದನ್ನು ಗಮನಿಸಬಹುದಾಗಿದೆ. ದೊಡ್ಡ ದೊಡ್ಡ ವ್ಯಾಪಾರ ಹಾಗೂ ವಾಣಿಜ್ಯ ಸಂಸ್ಥೆಗಳಲ್ಲಿ ಪುರುಷ ಪ್ರಧಾನವಾಗಿರುವುದನ್ನು ಕಾಣಬಹುದಾಗಿದೆ.

**ಅಡಿಟಿಪ್ಪಣಿಗಳು**

೧. ಕೆ.ಭೈರಪ್ಪ, ಭಾರತದ ಪ್ರಚಲಿತ ಸಾಮಾಜಿಕ ಸಮಸ್ಯೆಗಳು, ಪು.೨೮-೩೦

೨. ಪ್ರಭು ಎಸ್.ಕೆ.(ಅನು), ಹಿಂದೂ ಕಾನೂನು, ಪು.೩೨-೩೮

೩. ಕೆ.ಭೈರಪ್ಪ, ಪೂರ್ವೋಕ್ತ, ಪು.೨೮, ೪೫

೪. ಚ.ನ.ಶಂಕರರಾವ್, ಭಾರತದ ಸಮಾಜ, ಪು.೬೧೯

ಸಮಾಜದಲ್ಲಿ ಹೆಣ್ಣಿನ ಸ್ಥಾನಮಾನವನ್ನು ನಿರ್ಧರಿಸುವ ಬಹುಮುಖ್ಯ ಸಂಸ್ಥೆ ಮದುವೆ. ವಿವಾಹದಿಂದ ಏರ್ಪಡುವ ಹೊಸ ಸಂಬಂಧಗಳು ಕುಟುಂಬದ ಗಾತ್ರ ಹಾಗೂ ಸಂಬಂಧಗಳ ವ್ಯಾಪ್ತಿಯನ್ನು ವಿಸ್ತರಿಸುತ ವಷ್ಟೇ ಅಲ್ಲದೇ, ಆ ಸಂಬಂಧಗಳ ವ್ಯಾಪ್ತಿಯೊಳಗೆ ಸೇರ್ಪಡೆಯಾಗುವ ವ್ಯಕ್ತಿಗಳ ವಯಸ್ಸು, ಲಿಂಗ ಹಾಗೂ ಪತಿ ಪತ್ನಿಯರೊಡನೆ ಅವರು ಹೊಂದಿರುವ ಸಂಬಂಧಗಳ ಸ್ವರೂಪದ ಆಧಾರದ ಮೇಲೆ ಅವರಿಗೆ ಬೇರೆ-ಬೇರೆಯಾದ ಪಾತ್ರಗಳನ್ನು ವಹಿಸುತ್ತವೆ. ಈ ಪಾತ್ರ ಹಂಚಿಕೆ ಬಹುತೇಕ ಸಂದರ್ಭಗಳಲ್ಲಿ ಈಗಾಗಲೇ ಕೌಟುಂಬಿಕ ವ್ಯವಸ್ಥೆಯ ಒಳಗೆ ಹಾಸುಹೊಕ್ಕಾಗಿರುವಂಥ ಸ್ತ್ರೀ-ಪುರುಷ ಅಸಮಾನತೆಯನ್ನು ಮತ್ತಷ್ಟು ಬಲಗೊಳಿಸುತ್ತದೆ. ವಿವಾಹ ಎನ್ನುವ ಸಂಬಂಧದಲ್ಲಿ ಸೇರ್ಪಡೆಯಾದ ಸ್ತ್ರೀಯರಿಂದಲೇ ವಿಶೇಷವಾದ ನಡವಳಿಕೆಯನ್ನು ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ನಿರೀಕ್ಷಿಸುವುದು. ಪುರುಷನ ಬದುಕಿನಲ್ಲಿ ಹಾಗೂ ಸ್ಥಾನದಲ್ಲಿ ಬಹುತೇಕ ಸಂದರ್ಭಗಳಲ್ಲಿ ವಿವಾಹ ಗಮನಾರ್ಹವಾದ ಬದಲಾವಣೆಗಳನ್ನೇನು ತರದೇ ಹೋದರೂ, ಸ್ತ್ರೀಯಿಂದ ಮಾತ್ರ ಹತ್ತು ಹಲವಾರು ಬಗೆಯ ಪಾತ್ರಗಳನ್ನು ನಿರೀಕ್ಷಿಸುತ್ತದೆ. ಆಕೆ ತನ್ನ ಅಭಿರುಚಿಗಳು, ಆಸಕ್ತಿಗಳು, ಆಯ್ಕೆಯ ಸ್ವಾತಂತ್ರ್ಯ ಇವುಗಳೆಲ್ಲವನ್ನು ತ್ಯಜಿಸಿ, ತನ್ನ ಪತಿಯ ಹಾಗೂ ಆತನ ಕುಟುಂಬದ ಇತರ ಸದಸ್ಯರನ್ನು ಅನುಸರಣೆ ಮಾಡಬೇಕಾಗುತ್ತದೆ. ವಿವಾಹಿತ ಮಹಿಳೆಯನ್ನು ಗುರುತಿಸುವುದು ಇಂಥವನ ಹೆಂಡತಿ ಎಂದೇ ಹೊರತು, ಸ್ವತಂತ್ರ ವ್ಯಕ್ತಿತ್ವವನ್ನು ಹೊಂದಿರುವಂಥ ಓರ್ವ ವ್ಯಕ್ತಿಯಾಗಿಯಲ್ಲ. ಇಂದಿಗೂ ಹಲವು ಕುಟುಂಬಗಳಲ್ಲಿ ವಿವಾಹ ನಂತರ ಸ್ತ್ರೀಯ ಮೂಲ ಹೆಸರನ್ನೇ ಗಂಡನ ಮನೆಯವರು ಬದಲಾಯಿಸಿ ಬಿಡುತ್ತಾರೆ. ಹೆಜ್ಜೆ-ಹೆಜ್ಜೆಗೂ ಮಹಿಳೆಯ ವ್ಯಕ್ತಿತ್ವವನ್ನು ಘಾಸಿಗೊಳಿಸುತ್ತಾ, ಸದಾಕಾಲವೂ ಪುರುಷರ ಅಧೀನದಲ್ಲೇ ಇಡಬೇಕೆಂಬ ಜ್ಞಾಪಕವನ್ನು ನಡೆ-ನುಡಿಗಳ ಮೂಲಕ ನೀಡಲಾಗುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ವಿಶಾಲ ಮತ್ತು ಉದಾತ್ತವಾದ 'ಸ್ತ್ರೀ' ಪದಕ್ಕೆ ಅರ್ಥವಿದೆ. ಜಗತ್ತಿನಲ್ಲಿ ಸ್ತ್ರೀಯನ್ನು ತ್ಯಾಗಮಯಿ, ಪ್ರೇಮಮಯಿ ಎಂದು ಗುರುತಿಸುತ್ತಾರೆ. ಸಂಸಾರವೆಂಬ ರಥಕ್ಕೆ ಪುರುಷ-ಸ್ತ್ರೀ ಎರಡು ಚಕ್ರಗಳಿದ್ದಂತೆ. ಈ ಎರಡೂ ಚಕ್ರಗಳು ಸಮಾನವಾಗಿರಬೇಕು. ಇವು ಎರಡರಲ್ಲಿ ಒಂದು ಸರಿ ಇಲ್ಲದಿದ್ದರೂ ಸಂಸಾರವೆಂಬ ರಥದಲ್ಲಿ ಏರುಪೇರಾಗುತ್ತದೆ ಎನ್ನುವುದು ಮಾತ್ರ ಪ್ರಚಲಿತವಿದೆ. ಇಂತಹ ಆದರ್ಶ ಮಾತುಗಳು ಪುರುಷ ಪ್ರಧಾನ ಸಮಾಜದಲ್ಲಿ ನಗಣ್ಯವೆನಿಸಿದೆ. ಪ್ರಚಲಿತ ಜಗತ್ತಿನಲ್ಲಿ ವಿಶೇಷವಾಗಿ ಭಾರತದಲ್ಲಿ ಮಹಿಳೆ ಬಹುಸ್ತರಗಳಲ್ಲಿ ಶೋಷಿತಳಾಗಿ ಬಹುಶೋಚನೀಯ ಸ್ಥಿತಿಯಲ್ಲಿದ್ದಾಳೆ. ಇಲ್ಲಿ ಮಹಿಳೆಯ 'ಸ್ಥಾನಮಾನ'ಗಳ ಬಗ್ಗೆ ವಸ್ತುನಿಷ್ಠ ಚರ್ಚೆ ಕಷ್ಟದ ಕೆಲಸವಾಗಿದೆ. ಶತಶತಮಾನಗಳಿಂದಲೂ

ಪುರುಷರ ಅಮಾನವೀಯ ಶೋಷಣೆಯಿಂದಾಗಿ ಮಹಿಳೆಯು ಅಬಲೆಯಾಗಿ ಉಳಿದಿದ್ದಾಳೆ. ಬಹಳ ಹಿಂದಿನ ಪುರಾಣಕಾಲದಿಂದಲೂ ಹೆಣ್ಣು, ಗಂಡಿನ ತುಳಿತಕ್ಕೆ ಸಿಕ್ಕಿ ನಲುಗಿ ಹೋಗಿ ದ್ದಾಳೆ. ಮಹಾಭಾರತದಲ್ಲಿ ಭೀಷ್ಮ ತನ್ನ ತಮ್ಮನಿಗಾಗಿ ಕಾಶಿರಾಜನ ಮಕ್ಕಳಾದ ಅಂಬೆ, ಅಂಬಿಕೆ ತನ್ನನ್ನು ವರಿಸುವಂತೆ ಭೀಷ್ಮನನ್ನು ಒತ್ತಾಯಿಸಿದಳು. ಭೀಷ್ಮ ತನ್ನ ಶಪಥವನ್ನು ಮುಂದುಮಾಡಿಕೊಂಡು ಅಂಬೆಯನ್ನು ತಿರಸ್ಕರಿಸಿದ ಪುರುಷರಿಬ್ಬರಿಂದಲೂ ತಿರಸ್ಕೃತಳಾದ ಅಂಬೆ ಅಗ್ನಿಯಲ್ಲಿ ಆತ್ಮಾಹುತಿ ಮಾಡಿಕೊಂಡಳು.

ಇನ್ನೂ ದ್ರೌಪದಿ ಇವಳು ಐವರು ಪತಿಯರನ್ನು ಹೊಂದಿದ್ದರೂ ದುಶ್ಯಾಸನಿಂದ ವಸ್ತ್ರಾಪಹರಣಕ್ಕೆ ಗುರಿಯಾದಳು. ಜೀವನ ಪರ್ಯಾಂತ ರಾಮನನ್ನೇ ನಂಬಿ ಅವರ ಸ್ಮರಣೆಯನ್ನು ಮಾಡುತ್ತ ತಪಸ್ಸು ಮಾಡಿದ ಸಾಧ್ವಿ ಸೀತೆಗೆ ದೊರೆತ ಪುರಸ್ಕಾರ ಅಗ್ನಿ ಪರೀಕ್ಷೆ ಇಂತಹ ನೂರಾರು ನಿದರ್ಶನಗಳು ಮನು ಕುಲದ ಇತಿಹಾಸದಲ್ಲಿ ಹುದುಗಿ ಹೋಗಿವೆ. ಪುರುಷರಿಂದಲೇ ರಚಿಸಲ್ಪಟ್ಟಿರುವ ಪುರಾಣ, ಮಹಾಕಾವ್ಯಗಳಲ್ಲಿ ಮಹಿಳೆಯಿಂದ ಶೋಷಣೆಗೊಳಗಾದ ಮಹಾಕಾವ್ಯಗಳಲ್ಲಿ ಪುರುಷನ ಬಗ್ಗೆ ಒಂದು ಪ್ರಕರಣ ದಾಖಲಾಗಿಲ್ಲ ಎಂಬುದು ಗಮನಿಸಬೇಕಾಗಿರುವ ಸಂಗತಿ.

"ಯತ್ರ ನಾರ್ಯಾಸ್ತು ಪೂಜ್ಯಂತೆ ರಮಂತೇ ತತ್ರದೇವತಾ" ಎಂದು ಹೇಳಿದ ಸಂಸ್ಕೃತಿಯಲ್ಲೇ ವ್ಯವಸ್ಥಿತವಾಗಿ ಮಹಿಳೆಗೆ ಹಲವಾರು ಅಮಾನವೀಯ ಕಟ್ಟುಪಾಡುಗಳನ್ನು ವಿಧಿಸಿ, ಅನಿಷ್ಟ ಸಂಪ್ರದಾಯಗಳಿಗೆ ತಳ್ಳಿ ಪರತಂತ್ರಳನ್ನಾಗಿ ಮಾಡಿದ. ಬಾಲ್ಯದಲ್ಲಿ ತಂದೆ-ತಾಯಿ, ಯೌವ್ವನದಲ್ಲಿ ಪತಿ, ಮುಪ್ಪಿನಲ್ಲಿ ಮಕ್ಕಳಿಂದ ರಕ್ಷಿಸತಕ್ಕವಳೆಂದು ಹೇಳಿ ಭವ-ಬಂಧನದಲ್ಲಿ ಕಟ್ಟಿ ಹಾಕಿದೆ.[೧]

ವೇದ ಕಾಲದಲ್ಲಿ ಮಹಿಳೆ ಸಾಮಾಜಿಕ, ಬೌದ್ಧಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದ ಉಲ್ಲೇಖಗಳು ಇವೆ. ವಿಶ್ವವರಾ, ಅಪಲಾ, ಲೋಪಾಮುದ್ರಾ ಶಚಿ ಮುಂತಾದವರು ರಚಿಸಿರುವ ಶ್ಲೋಕಗಳಿಂದ, ಪತ್ನಿಯೂ ಪತಿಯೊಡನೆ ಯಜ್ಞ ಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಿದ್ದ ವಿಷಯ ತಿಳಿಯಬಹುದು. ಕಾಲಚಕ್ರ ಉರುಳಿದಂತೆ ಸಮಾಜದಲ್ಲಿ ಪುರುಷನ ಹಿಡಿತ ಹೆಚ್ಚಿ, ಮಹಿಳೆ ಗಂಡಸಿನ ಭೋಗವಸ್ತುವಾಗಿ ಮಾರ್ಪಟ್ಟಳು. ಚತುರ್ವರ್ಣದ ಪದ್ಧತಿ ರೂಪುಗೊಂಡಿತು. ದೈಹಿಕ ಶ್ರಮಕ್ಕೆ ಒಪ್ಪದ ಪುರೋಹಿತ ಶಾಹಿ ಗಳು ತಾವು ಆಚರಿಸುವುದು ಮಾತ್ರ ಶೇಷ್ಟವೆಂದು ಸಾರಲು ಉಚ್ಚ-ನೀಚ, ಪವಿತ್ರ-ಅಪವಿತ್ರ ಎಂಬ ಹಲವು ಕಟ್ಟುಪಾಡುಗಳನ್ನು ತಂದರು. ಸ್ತ್ರೀಯರನ್ನು "ಗೃಹಿಣಿ ಗೃಹಮುಚ್ಯತೆ" ಎಂದು ಹೊಸ್ತಿಲು ದಾಟದಂತೆ ಮಾಡಿ ಇದ್ದ ಹಲವು ಸವಲತ್ತುಗಳನ್ನು ಕಿತ್ತು ಕೊಂಡರು. 'ಬ್ರಹ್ಮೋಪದೇಶ', ಯಜ್ಞ-ಯಾಗಾದಿಗಳಿಂದ ದೂರವಿಟ್ಟರು. ಪರ-ಅಪರ ಕರ್ಮಗಳ, ಭೌತಿಕ, ಭೌದ್ಧಿಕ, ಆಸ್ತಿಯ ಹಕ್ಕುಗಳು ಗಂಡುಮಕ್ಕಳ ಪಾಲಾಯಿತು. ಹೆಣ್ಣು ವಸ್ತುವಿನ ಮೌಲ್ಯ ಇಳಿಯಿತು. ಗಂಡು ವಂಶೋದ್ಧಾರಕನಾದ,

ಹೆಣ್ಣು ಮಗು ಹುಟ್ಟುವುದೇ ದೌರ್ಭಾಗ್ಯವೆಂಬ ನೀಚ ಭಾವನೆ ಸಮಾಜದಲ್ಲಿ ಬೇರೂರಲು ಹೆಚ್ಚು ಕಾಲಬೇಕಾಗಿಲ್ಲ.

ಉಪನಿಷತ್ತುಗಳಲ್ಲಿ ಮಾತ್ರ ಸ್ತ್ರೀಯರ ಬಗ್ಗೆ ಹೆಚ್ಚು ಉದಾರವಾಗಿದ್ದು, ಸ್ತ್ರೀಯರು ಯಜ್ಞಯಾಗದಿಗಳನ್ನು ಮಾಡಲು, ವೇದಗಳನ್ನು ಓದಲು ಅರ್ಹತೆ ಕೊಟ್ಟಿರುವುದನ್ನು ಮರೆಯುವಂತಿಲ್ಲ. ಬೃಹದಾರಣ್ಯ ಉಪನಿಷತ್ತು ಜನಕ ರಾಜನ ದರಭಾರಿನಲ್ಲಿ ಯಜ್ಞವಲ್ಕನ ಜೊತೆಗೆ ಗಾರ್ಗಿಯು ಧಾರ್ಮಿಕ ಚರ್ಚೆಯಲ್ಲಿ ಭಾಗವಹಿಸಿದ್ದನ್ನು ತಿಳಿಸುತ್ತದೆ. ಆದರೆ ಇಂದು ಕಾಲ ಬದಲಾವಣೆ ಆಗಿದೆ, ಇನ್ನೂ ಆಗುತ್ತಿದೆ. ಸ್ತ್ರೀಯರ ವ್ಯಕ್ತಿತ್ವದ ಬೆಳವಣಿಗೆಯು ಆಗಬೇಕಾದರೆ ಶಿಕ್ಷಣ ಬಹಳ ಮುಖ್ಯ. ಹಾಗೇ ಪುರುಷರನ್ನು ಅವಲಂಬಿಸಬಾರದು. ಪೂರ್ಣ ಅವಲಂಬನೆಯಾಗುವುದು ಅವಳನ್ನು ಗುಲಾಮಳನ್ನಾಗಿ ಮಾಡುತ್ತದೆ. ವೈಚಾರಿಕ ಗುಲಾಮಗಿರಿ ಅವಳನ್ನು ಕ್ಷುದ್ರ ಜೀವಿಯನ್ನಾಗಿ ಮಾಡುತ್ತದೆ. ಕೇವಲ ಸೌಂದರ್ಯಕ್ಕೆ ಮಹತ್ವ ಕೊಡುವ ಹೆಣ್ಣು, ಮರ್ಯಾದಸ್ಥ, ಸ್ವಂತ ವ್ಯಕ್ತಿತ್ವವನ್ನು ಹೊಂದಿದವಳಾಗುವುದಿಲ್ಲ. ಬೌದ್ಧಿಕ ಮತ್ತು ಮಾನಸಿಕ ಶಿಕ್ಷಣ ಸ್ತ್ರೀಯನ್ನು ಒಳ್ಳೆಯ ಮಗಳನ್ನಾಗಿ ಸ್ನೇಹಮಯಿ ಸೋದರಿಯನ್ನಾಗಿ ಮಾಡುತ್ತದೆ. ಸ್ತ್ರೀಯು ಪುರುಷನಿಗಿಂತ ಯಾವುದರಲ್ಲಿ ಕಡಿಮೆ? ಕ್ಷುಲ್ಲಕ ವಿಚಾರಗಳನ್ನು ಬಿಟ್ಟು ಸ್ತ್ರೀಯರು ತಮ್ಮ ಅಂತರಂಗದ ವಿಕಾಸಕ್ಕೆ ಹೆಚ್ಚು ಗಮನವನ್ನೀಯಬೇಕು. ಹೊರ ಜಗತ್ತಿನ ಜ್ಞಾನ ಅವಶ್ಯಕ ಪದವಿಗಳನ್ನು ಸಂಪಾದಿಸುವುದಿಲ್ಲ. ಮಾನವನ ಇತಿಹಾಸವೆಂದರೆ ಪುರುಷರು ಸ್ತ್ರೀಯರನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳಲು ಆಕೆಯ ಮೇಲೆ ನಡೆಸಿದ ಅನ್ಯಾಯ ಮತ್ತು ದೌರ್ಜನ್ಯಗಳು ಮಹಿಳೆಯರ ವಿಚಾರಗಳನ್ನು ಗಮನಿಸದೇ ಪುರುಷ ತಾನೇ ಮಾಡಿದ ಕಾನೂನುಗಳಿಗೆ ಆಕೆ ಒಳಗಾಗುವಂತೆ ಒತ್ತಾಯ ಮತ್ತು ಕಟ್ಟುಪಾಡುಗಳನ್ನು ತಂದ.

ಸ್ತ್ರೀಯರು ಮತ್ತು ಪುರುಷರೆಂದರೆ ಪ್ರಾಕೃತಿಕವಾಗಿಯೂ ಪರಸ್ಪರ ಪೂರಕವಾಗಿ ಜೀವಿಗಳು ಆದ್ದುದರಿಂದ ಸಮಾಜದಲ್ಲಿ ಪುರುಷರಷ್ಟೇ ಮಹಿಳೆಯರ ಪಾತ್ರವೂ ಪ್ರಮುಖವಾದುದು. ಆದರೆ ಎಲ್ಲಾ ರಾಷ್ಟ್ರಗಳಲ್ಲಿ ಹೆಣ್ಣು ಶೋಷಿತ ವರ್ಗಕ್ಕೆ ಸೇರಿದವಳಾಗಿದ್ದಾಳೆ. ಹಾಗಾಗಿ ಸ್ತ್ರೀಯರ ಸ್ಥಾನಮಾನದ ಪ್ರಶ್ನೆಯು ಸಮಾಜ ಶಾಸ್ತ್ರೀಯ ಚಿಂತನೆಗೆ ಒಂದು ಪ್ರಮುಖ ವಿಷಯವಾಗಿದೆ. 'ಅಬಲೆ' ಎಂದು ಪರಿಗಣಿಸಲ್ಪಟ್ಟು ಅವಗಣನೆ, ದಮನ ಹಾಗೂ ಶೋಷಣೆಗೆ ಒಳಗಾದ ಮಹಿಳೆಯರ ಸ್ಥಾನಮಾನದ ಐತಿಹಾಸಿಕ ಅಧ್ಯಯನವು ಪುರಾತನ ಭಾಂತೆ, ಮಧ್ಯಯುಗೀನ ಭಾರತ ಹಾಗೂ ಆಧುನಿಕ ಭಾರತದಲ್ಲಿ ಹೇಗಿತ್ತು ಎಂಬುದರ ಚಿತ್ರಣ ನೀಡುತ್ತದೆ. ಪುರಾತನ ಭಾರತದಲ್ಲಿ ಅಂದರೆ ಭಾರತದ ಮೇಲೆ ಮುಸ್ಲಿಂ ಆಕ್ರಮಣಗಳಾಗಿ ಇಲ್ಲಿ ಮುಸ್ಲಿಂ ಅರಸರ ಆಳ್ವಿಕೆ ಆರಂಭವಾಗುವ ಮೊದಲೇ ಸ್ತ್ರೀಯರ ಸ್ಥಾನಮಾನಗಳಲ್ಲಿ ಎರಡು ಪರಿಸ್ಥಿತಿಗಳಿದ್ದುದು ಕಂಡುಬರುತ್ತದೆ. ನಾವು ಇವುಗಳನ್ನು ವೇದಗಳ ಕಾಲ ಹಾಗೂ ವೇದೋತ್ತರ ಕಾಲವೆಂಬುದಾಗಿ ವಿಂಗಡಿಸುಬಹುದಾಗಿದೆ. ಋಗ್ವೇದ ಕಾಲದಲ್ಲಿ ಸ್ತ್ರೀಯರ ಪ್ರತಿಯೊಂದು ಕ್ಷೇತ್ರದಲ್ಲಿಯೂ ಪುರುಷರಿಗೆ

ಸಮಾನರಾಗಿ ಜೀವನ ಸಾಗಿಸುತ್ತಿದ್ದರು. ಸ್ತ್ರೀಯರಿಗೆ ಉಪನಯನ, ವಿದ್ಯಾಭ್ಯಾಸ, ಯಜ್ಞಯಾಗಾದಿಗಳಲ್ಲಿ ಭಾಗವಹಿಸುವಿಕೆ, ಯುದ್ಧ, ವಿದ್ಯೆ, ನೃತ್ಯ, ಸಂಗೀತ, ಶಿಕ್ಷಣ ಅಂತರ್ಜಾತೀಯ ವಿವಾಹಗಳು. ಪಿತ್ರಾರ್ಜಿತ ಆಸ್ತಿಯ ಹಕ್ಕು, ವಿಧವಾ ವಿವಾಹಕ್ಕೆ ಹಾಗೂ ನಿಯೋಗಕ್ಕೆ ಆಸ್ಪದವಿದ್ದಿತು. ನಂತರದ ವೇದಗಳ ಕಾಲದಲ್ಲಿ ಈ ಸ್ಥಾನಮಾನದಲ್ಲಿ ಸ್ವಲ್ಪ ಚ್ಯುತಿಯುಂಟಾಗಿದ್ದರೂ ವೇದೋತ್ತರ ಕಾಲದ ಪರಿಸ್ಥಿತಿಯಲ್ಲಿ ಗಂಭೀರ ಪರಿವರ್ತನೆಗಳು ಕಂಡುಬಂದವು. ಸ್ತ್ರೀಯರನ್ನು ಅಬಲಯರೆಂದೂ, ಸ್ವಾತಂತ್ರ್ಯಕ್ಕೆ ಅನರ್ಹರೆಂದೂ, ಪುರುಷರಿಂದ ರಕ್ಷಿಸಲ್ಪಡಬೇಕಾದವರೆಂದೂ ವ್ಯಾಖ್ಯಾನಿ ಸಲ್ಪಟ್ಟದ್ದಲ್ಲದೆ. ಅವರನ್ನು ಕುಲಿತೆಯರು, ನೀಚರು ಹಾಗೂ ನಂಬಿಕೆ ದ್ರೋಹಿಗಳೆಂದು ಜರೆಯಲಾಯಿತು. ಅಂತೂ ಸ್ಮೃತಿಗಳ ಕಾಲದಲ್ಲಿ ಮಹಿಳೆಯರ ಸ್ಥಾನಮಾನದ ಪತನ ಆರಂಭವಾಗಿ ಅವರ ಮೇಲೆ ಅನೇಕ ನಿರ್ಬಂಧಗಳು ಹೇರಲ್ಪಟ್ಟುವು. ಹೀಗೆ ವೇದೋತ್ತರ ಕಾಲದಲ್ಲಿ ಮಹಿಳೆಯರ ಶೋಷಣೆಯ ಬೀಜಾಂಕುರ ವಾಯಿತು.

ಮಧ್ಯಯುಗೀನ ಭಾರತವು ಸ್ತ್ರೀಯರನ್ನು ಪ್ರತಾಪಕ್ಕಿಳಿಸಿದ ಐತಿಹಾಸಿಕ ಕಾಲಘಟ್ಟವಾಗಿದೆ. ಈ ಕಾಲದಲ್ಲಿ ಮಹಿಳೆಯರನ್ನು ಕೇವಲ ಆಸ್ತಿಯೆಂಬಂತೆ ಪರಿಗಣಿಸಲ್ಪಟ್ಟದ್ದಲ್ಲದೆ ಪಾತಿವ್ರತ್ಯದ ಕಠಿಣವಾದ ನಿಯಮಗಳನ್ನು ಹೇರಲಾಯಿತು. ಸತಿಪದ್ಧತಿ, ಪರದಾ ಪದ್ಧತಿ, ಬಾಲ್ಯವಿವಾಹ ಮುಂತಾದ ಅನಿಷ್ಟ ಸಂಪ್ರದಾಯಗಳು ಜಾರಿಗೆ ಬಂದವು. ಮಹಿಳೆಯರ ಆಸ್ತಿ ಹಕ್ಕನ್ನು ಮೊಟಕುಗೊಳಿಸಲಾಯಿತು ಹಾಗೂ ವಿಧವಾ ವಿವಾಹಗಳನ್ನು ನಿಷೇಧಿಸಲಾಯಿತು. ಅಂತೂ ಸ್ತ್ರೀಯು ಸಂಪೂರ್ಣವಾಗಿ ಪುರುಷನ ಸೊತ್ತು ಹಾಗೂ ತೊತ್ತು ಎಂಬ ದುರವಸ್ಥೆ ಉಂಟಾಯಿತು. ಸ್ತ್ರೀಯರು ಶಿಕ್ಷಣದಿಂದ ಪೂರ್ಣ ವಂಚಿತರಾಗಿ ಮನೆಯ ನಾಲ್ಕು ಗೋಡೆಗಳ ಮಧ್ಯದಲ್ಲಿನ ಕತ್ತಲಲ್ಲಿ ಕರಗುವಂತಾಯಿತು. ಅವರ ಕೊರಗಿನ ಉಸಿರು ಆಧುನಿಕ ಯುಗದ ತನಕವೂ ಹೊರ ಪ್ರಪಂಚಕ್ಕೆ ಕೇಳಿಸಲೇ ಇಲ್ಲ. ಆಧುನಿಕ ಯುಗವು ಭಾರತದಲ್ಲಿ ಬ್ರಿಟಿಷರ ಆಳ್ವಿಕೆಯೊಂದಿಗೆ ಆರಂಭವಾಯಿತು. ಈ ಕಾಲದಲ್ಲಿ ರಾಜಾರಾಮ ಮೋಹನರಾಯ್, ಈಶ್ವರಚಂದ್ರ ವಿದ್ಯಾಸಾಗರ್, ರಮಾಬಾಯಿರಾನಡೆ, ಡಿ.ಕೆ.ಕರ್ವೆ, ಮಹಾತ್ಮಾಗಾಂಧಿ ಮೊದಲಾದವರೂ ಮಹಿಳೆಯರ ಸ್ಥಾನಮಾನದ ಸುಧಾರಣೆಯಲ್ಲಿ ಪ್ರಯತ್ನಶೀಲರಾಗಿದ್ದರು. ಆಧುನಿಕ ಯುಗದಲ್ಲಿ ಶಿಕ್ಷಣ ಮತ್ತು ಉದ್ಯೋಗ ನಗರೀಕರಣ, ಮತ್ತು ಕೈಗರೀಕರಣ, ವಿಭಕ್ತ ಕುಟುಂಬ ಪದ್ಧತಿ, ಸಮೂಹ ಮಾಧ್ಯಮಗಳು ಶಾಸನಾತ್ಮಕ ಸುಧಾರಣೆಗಳು ಮಹಿಳೆಯರ ಸ್ಥಾನಮಾನದ ಉನ್ನತಿಗೆ ಸಹಕಾರಿಯಾಗಿವೆ.

ಇಂದು ಶಿಕ್ಷಣದಲ್ಲಿ ಉದ್ಯೋಗಗಳಲ್ಲಿ ಹಾಗೂ ಸಮುದಾಯಿಕ ಭಾಗವಹಿಸುವಿಕೆಯಲ್ಲಿ ಪುರುಷರೊಂದಿಗೆ ಸಮಾನತೆಯತ್ತ ಧಾವಿಸುತ್ತಿರುವ ಮಹಿಳೆಯ ಆಸ್ತಿ ಹಕ್ಕು ವಿವಾಹ ವಿಚ್ಛೇದನ, ಪುನರ್ವಿವಾಹ, ವಿಧವಾ ವಿವಾಹ ಇತ್ಯಾದಿ ಶಾಸನಾತ್ಮಕ ಅವಕಾಶಗಳ ಮೂಲಕ ಶೋಷಣೆಯಿಂದ ಮುಕ್ತಗೊಳ್ಳುವ ಸಾಧ್ಯತೆ ಹೊಂದಿದ್ದಾಳೆ. ಸ್ತ್ರೀಯರ ಸ್ವಾತಂತ್ರ್ಯವೆಂದರೆ ಸ್ವಚ್ಛಂದತೆ ಅಲ್ಲವೆಂಬ ಪ್ರಜ್ಞೆಯಿಂದ ಮುಂದುವರೆದರೆ

ಮಹಳೆಯರ ಸ್ಥಾನಮಾನಗಳ ಉನ್ನತಿಗೆ ಪೂರಕ ಪರಿಸರ ನಿರ್ಮಾಣವಾಗುವುದರಲ್ಲಿ ಸಂಶಯವಿಲ್ಲ. ಆಧುನಿಕ ಯುಗದ ಸುಧಾರಣೆಗಳ ಬಳಿಕವೂ ಭಾರತದಲ್ಲಿ ಮಹಿಳೆಯರ ಅನೇಕ ಸಮಸ್ಯೆಗಳು ಜೀವಂತವಾಗಿವೆ ಹಾಗೂ ಇನ್ನೂ ಅನೇಕ ಸಮಸ್ಯೆಗಳು ಹುಟ್ಟಿಕೊಂಡಿವೆ. ಪಿತೃಪ್ರಧಾನ ವ್ಯವಸ್ಥೆಯ ಮುಂದುವರಿಕೆ ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ಮಾತಿಗೆ ಪುಷ್ಠಿದೊರಕುತ್ತಿರುವುದು ಹಾಗೂ ಸಾಮಾಜಿಕ ವರ್ಗಭೇದದ ಪರಿಸರವು ಮಹಿಳೆಯರ ಸಮಸ್ಯೆಗಳನ್ನು ಪೋಷಿಸುತ್ತಿವೆ. ಮುಖ್ಯವಾಗಿ ಕಾಡುತ್ತಿರುವ ಸಮಸ್ಯೆಗಳೆಂದರೆ ತಾರತಮ್ಯ ಧೋರಣೆ, ನೈತಿಕತೆಯ ದ್ವಂದ್ವ, ಮಹಿಳೆಯರ ಮೇಲಿನ ದೌರ್ಜನ್ಯ, ಶ್ರಮವಿಭಜನೆ, ನಿರುದ್ಯೋಗ ನಿರಕ್ಷರತೆ ಮತ್ತು ಅನಾರೋಗ್ಯ, ವರದಕ್ಷಿಣೆ ಮತ್ತು ವಧುದಹನ ವಿವಾಹ ವಿಚ್ಛೇದನ, ಕೀಳು ಅಭಿರುಚಿಯ ಪ್ರದರ್ಶನಗಳಲ್ಲಿ ಹೆಣ್ಣಿನ ಶೋಷಣೆ ಹಾಗೂ ಅಭಿವೃದ್ಧಿಯ ಹೆಸರಿನಲ್ಲಿ ಕಂಡುಬರುತ್ತಿರುವ ವಿರೋಧಾಭಾಸ. ಈ ಸಮಸ್ಯೆಗಳಿಗೆ ಮುಖ್ಯ ಕಾರಣಗಳೆಂದರೆ ಸ್ತ್ರೀಯರಲ್ಲಿ ಆತ್ಮಸ್ಥೈರ್ಯವಿಲ್ಲದಿರುವುದು, ಸಂಘಟನಾತ್ಮಕ ಹೋರಾಟ ಕೊರತೆ ಪೂರಕ ಸಾಮಾಜಿಕ ಪರಿಸರ ಬೆಂಬಲವಿಲ್ಲದಿರುವುದೇ ಆಗಿದೆ. ಆದುದರಿಂದ ಮಹಿಳೆಯರ ಸ್ಥಾನಮಾನದ ಉನ್ನತಿ ಕುರಿತಾಗ ನಾವಿರಿಸಿಕೊಳ್ಳುವ ಭವಿಷ್ಯದ ನಿರೀಕ್ಷೆಗಳೆಂದರೆ ಮಹಿಳೆಯರ ವ್ಯಕ್ತಿತ್ವ ವಿಕಾಸಕ್ಕಾಗಿ ಸಂಪೂರ್ಣ ಶಿಕ್ಷಣ, ಔದ್ಯೋಗಿಕ ತರಬೇತಿ ಹಾಗೂ ಆತ್ಮಸ್ಥೈರ್ಯ ತುಂಬುವ ಕಾರ್ಯಗಳಾಗಬೇಕು. ಇನ್ನೂ ಮಹಿಳೆಯರ ಸಂಘಟನಾತ್ಮಕ ಬೆಳವಣಿಗೆಯಲ್ಲಿರುವ ತೊಡಕುಗಳು ನಿವಾರಣೆಗೊಂಡು ರಚನಾತ್ಮಕ ಚಟುವಟಿಕೆಗಳು ಹೆಚ್ಚಬೇಕು ಇದಕ್ಕೆ ಪೂರಕವಾದ ಸಾಮಾಜಿಕ ಪರಿಸರ ನಿರ್ಮಾಣವಾಗುವಲ್ಲಿ ಸರಕಾರದ, ಅಭಿವೃದ್ಧಿ ಕಾರ್ಯಗಳಲ್ಲಿ ಯಶಸ್ಸು, ಕಾನೂನಿನ ಸೂಕ್ತ ಅನುಷ್ಠಾನ ಮಧ್ಯಮಗಳಲ್ಲಿ ಮಹಿಳೆಯರ ಗೌರವ ಹೆಚ್ಚಿಸುವಂತಹ ಕಾರ್ಯಕ್ರಮಗಳು ಹಾಗೂ ಸ್ವಯಂ ಸೇವಾ ಸಂಸ್ಥೆಗಳ ರಚನಾತ್ಮಕ ಚಟುವಟಿಕೆಗಳು ಆಗಬೇಕಾಗಿವೆ. ಮುಖ್ಯವಾಗಿ ಸ್ತ್ರೀಯರು ಅಬಲೆಯರೆಂಬ ದೃಷ್ಟಿಕೋನವು ಬದಲಾಗಿ ಅವರು ಸಶಕ್ತರೆಂಬ ವಿಶ್ವಾಸ ಜಾಗೃತಗೊಳ್ಳಬೇಕಾಗಿದೆ.

ಸಾಂಪ್ರದಾಯಕ ಕೌಟುಂಬಿಕ ಜೀವನದಲ್ಲಿ ಹೆಣ್ಣು ಮಕ್ಕಳಿಗೆ ಕ್ರಿಯಾತ್ಮಕ ಸ್ಥಾನವಿರಲಿಲ್ಲ. ಹೆಣ್ಣು ಮಕ್ಕಳಿಗೆ ಮರ್ಯಾದೆ, ಗೌರವ ಇತ್ತು. "ಎಲ್ಲಿ ಹೆಣ್ಣು ಮಕ್ಕಳನ್ನು ಮರ್ಯಾದಿಸಲಾಗುತ್ತಿದೆಯೋ ಅಲ್ಲಿ ದೇವರು ಸಂತೋಷಿಪಡುತ್ತಾನೆ" ಎಂದು ಹೇಳಿದ್ದುಂಟು.[೨] ಹೆಣ್ಣುಮಕ್ಕಳಿಗೆ ಸ್ವಾತಂತ್ರ್ಯ ಯೋಗ್ಯವಲ್ಲ ಎನ್ನುವ ಮನುವಿನ ವಿಚರವಂತೂ ಕಟುವಾಗಿತ್ತು. ಹೀಗಾಗಿ ಹೆಣ್ಣುಮಕ್ಕಳು ಇಳಿವಯಸ್ಸಿನಲ್ಲಿ ಮಕ್ಕಳ ಆಶ್ರಯದಲ್ಲಿಯೂ, ಹೆಣ್ಣುಮಕ್ಕಳು ಇಳಿ ವಯಸ್ಸಿನಲ್ಲಿ ಮಕ್ಕಳ ಆಶ್ರಯದಲ್ಲಿಯೂ, ಹೆಣ್ಣು ಮಕ್ಕಳು ಚಿಕ್ಕಂದಿನಲ್ಲಿ ತಂದೆಯ ಆಶ್ರಯದಲ್ಲಿಯೂ ಜೀವನ ಮಾಡಬೇಕಾಗಿತ್ತು. ಕೌಟುಂಬಿಕ ಜೀವನದಲ್ಲಿ ನಿಯಂತ್ರಿತ ಸ್ಥಾನವನ್ನು ಹೊಂದಿದ್ದರು. ಕಾಲಾನುಕ್ರಮವಾಗಿ ಹೆಣ್ಣುಮಕ್ಕಳ ಸ್ಥಾನಮಾನಗಳಲ್ಲಿ

ಬದಲಾವಣೆಗಳು ಕಂಡುಬರುತ್ತಿವೆ. ಹೆಣ್ಣುಮಕ್ಕಳ ಸ್ಥಾನಮಾನಗಳು ೨೦ರ ಕ್ರಿಶಕದಲ್ಲಿ ತೊಂದರೆಗೆ ಈಡಾದವು. ಬಾಲ್ಯವಿವಾಹ ಮತ್ತು ಸತೀಪದ್ಧತಿಗಳಂಥ ಅನಿಷ್ಟಗಳು ಜಾರಿಗೆ ಬಂದವು. ಬ್ರಿಟಿಷರ ಆಳ್ವಿಕೆಯಲ್ಲಿ ಹಲವಾರು ಸಮಾಜ ಸುಧಾರಕರಾದ ರಾಜಾರಾಮ ಮೋಹನರಾಯ, ಮಹಾತ್ಮಗಾಂಧಿ, ರಾನಡೆ ದಯಾನಂದ ಸರಸ್ವತಿ, ಆನಿಬೆಸೆಂಟ್ ಇವರ ಸತತ ಪ್ರಯತ್ನದಿಂದ ಹೆಣ್ಣುಮಕ್ಕಳ ಸ್ಥಾನಮಾನದಲ್ಲಿ ಆಗ ಸುಧಾರಣೆ ಉಂಟಾಯಿತು. ಅವರ ಸ್ಥಾನಮಾನ ಭಾರತದ ಸ್ವಾತಂತ್ರ್ಯಾನಂತರ "ವಿವಿಧ ಕಾನೂನುಗಳಲ್ಲಿ ರಕ್ಷಣೆಯು ಇನ್ನೂ ಉತ್ತಮ ಗೊಂಡಿತು. ಬಾಲ್ಯವಿವಾಹ ವಿರೋಧ ಕಾಯ್ದೆ(೧೯೨೯) ಹಿಂದುಗಳಿಗೆ ಕಲಿಯುವ ಸೌಲಭ್ಯ ಕಾಯ್ದೆ(೧೯೩೦), ಹಿಂದೂ ಉತ್ತರಾಧಿಕಾರ ಕಾಯ್ದೆ(೧೯೫೬), ವಿಶೇಷ ವಿವಾಹ ಕಾಯ್ದೆ(೧೯೫೪), ಹಿಂದೂ ವಿವಾಹ ಕಾಯ್ದೆ(೧೯೫೫) ಹೆಣ್ಣು ಮಕ್ಕಳನ್ನು ಅನೀತಿ ಮಾರ್ಗಕ್ಕೆ ಒಡ್ಡುವುದನ್ನು ಬಗ್ಗುಬಡಿಯುವ ಕಾಯ್ದೆ(೧೯೫೮) ವರದಕ್ಷಿಣಾ ನಿಷೇಧ ಕಾಯ್ದೆ(೧೯೬೬) ಮುಂತಾದವುಗಳು ಹೆಣ್ಣುಮಕ್ಕಳ ಸ್ಥಾನಮಾನ ಕಾಯ್ದುಕೊಳ್ಳಲು ರಕ್ಷಣೆ ಇತ್ತಿವೆ".[೩] ಅಲ್ಲದೇ ಹೆಣ್ಣು ಮಕ್ಕಳೀಗೆ ತಮ್ಮ ಸ್ಥಾನಮಾನ ಹೆಚ್ಚಿಸಿಕೊಳ್ಳಲು ಹಕ್ಕನ್ನು ಅಧಿಕಾರವನ್ನು ತಂದುಕೊಟ್ಟಿವೆ. ಆಧುನಿಕ ಸಮಾಜದಲ್ಲಿ ಹೆಣ್ಣುಮಕ್ಕಳ ಕಾರ್ಯಕ್ಷೇತ್ರ ಮನೆಯ ಹೊರವಲಯಗಳಿಗೂ ಚಾಚಿದೆ.

. ಆಧುನಿಕ ಸಮಾಜದಲ್ಲಿ ಹೆಣ್ಣುಮಕ್ಕಳು ತಮಗೆ ಇಷ್ಟಬಂದಷ್ಟು ಶಿಕ್ಷಣ ಕಲಿಯಬಹುದಾಗಿದೆ. ಬೇಕಾದ ನೌಕರಿ ಮಾಡಬಹುದಾಗಿದೆ. ಭಾರತದ ಸಂವಿಧಾನದ ಪ್ರಕಾರ ಸಮಾನತೆ ಹಕ್ಕನ್ನು ಹೊಂದಿದ್ದಾಳೆ. ವಿವಾಹದ ವಿಷಯದಲ್ಲಿ ಸ್ವಾತಂತ್ರ್ಯ ಹೊಂದಿರುವಳು. ಅಂತರ್ಜಾತಿಯ ವಿವಾಹವನ್ನು ಆಗಬಹುದಾಗಿದೆ. ಮಿತಸಂತಾನದ ವಿಚಾರವನ್ನು ಗಂಡನೊಂದಿಗೆ ಮಾತನಾಡಬಲ್ಲಳು. ವಿವಾದಾತ್ಮಕ ವಿವಾಹ ಸಂಬಂಧಗಳ ವ್ಯವಹಾರಗಳಿಂದ ದೂರವಾಗ ಬಯಸಿದರೆ ವಿವಾಹ ವಿಚ್ಛೇದನೆ ಮಾಡಿಕೊಳ್ಳಬಲ್ಲಳು. ನೌಕರಿ ಮಾಡುವ ಹೆಣ್ಣುಮಕ್ಕಳ ಸ್ಥಾನ ಭದ್ರವಾಗುತ್ತಿದೆ. ಆಕೆ ಗಳಿಸುವ ವ್ಯಕ್ತಿ ಆಗಿರುವುದರಿಂದ ಕುಟುಂಬದಲ್ಲಿ ಆಕೆಗೆ ವಿಶಿಷ್ಟಸ್ಥಾನ ಸಿಗುತ್ತಿದೆ. ಈ ರೀತಿ ಬದಲಾದ ಸ್ಥಾನಗಳಿಂದ ಕೌಟುಂಬಿಕ ಜೀವನದಲ್ಲಿ ಹಲವಾರು ಮೌಲ್ಯಗಳು ಬದಲಾಗುತ್ತಿವೆ. ಗಂಡನ ಬಗ್ಗೆ ಆತನ ಕೌರ್ಯ, ಕ್ಷೇತ್ರದ ಬಗ್ಗೆ, ಪರಸ್ಪರ ಪಾತ್ರಗಳ ಹೊಂದಾಣಿಕೆ ಬಗ್ಗೆ, ಮಕ್ಕಳ ಪಾಲನೆ ಪೋಷಣೆ, ಆರ್ಥಿಕ ಸ್ವಾತಂತ್ರ್ಯದ ಬಗ್ಗೆ, ಹಿರಿಯರ ಬಗ್ಗೆ ಹೆಣ್ಣು ಮಕ್ಕಳ ವಿಚಾರಗಳು ಬದಲಾಗುತ್ತಿವೆ. ಈ ಹೊಸ ವಿಚಾರಗಳು ಹೆಣ್ಣುಮಕ್ಕಳನ್ನು ಅವಿಭಕ್ತ ಕುಟುಂಬದ ಬಗ್ಗೆ ಆಸೆಯಿಲ್ಲದಂತೆ ಮಾಡಿ, ವಿಭಕ್ತ ಕುಟುಂಬಗಳನ್ನು ಬೆಳೆಸುವಲ್ಲಿ ಪ್ರೇರೇಪಿಸುತ್ತವೆ. ಒಟ್ಟಿನಲ್ಲಿ ಹೆಣ್ಣು ಮಕ್ಕಳ ಬದಲಾದ ಸ್ಥಾನಮಾನಗಳು ಆಧುನಿಕ ಕೌಟುಂಬಿಕ ಜೀವನದ ರೀತಿ ಬದಲಾಯಿಸಿದೆ.

ಪಿತೃಪ್ರಧಾನ ವ್ಯವಸ್ಥೆಯಲ್ಲಿ ವಿವಾಹ ಎಷ್ಟು ಮುಖ್ಯವೆಂದರೆ ವಿವಾಹಿತ ಪುರುಷ ಪಿತೃಧರ್ಮವನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಅರ್ಹವಾಗುತ್ತಾನೆ ಎಂದ ಮೇಲೆ ಹೆಣ್ಣಿಗೆ ವಿವಾಹವೆಂದರೆ

ತವರಿನಿಂದ ಪತಿಗೃಹಕ್ಕೆ ಸಾಗಿ ಬರುವ ಒಂದು ಕ್ರಿಯೆ. ಸ್ವಂತ ಅಧಿಕಾರದ ಮೇಲೆ ಆಕೆಗೆ ಯಾವ ಬೆಲೆಯೂ ಇಲ್ಲ, ಪಾತ್ರವೂ ಇಲ್ಲ. ಮುಂದೆ ಆಗಲಿರುವ ಸಂತಾನೋತ್ಪತ್ತಿ, ಅದರ ಲಾಲನೆ, ಪಾಲನೆ ಎಲ್ಲವೂ ಆಕೆ ವಿವಾಹವಾಗಿ ಬಂದ ಕುಟುಂಬಕ್ಕೆ ಸೇರಿರುವುದರಿಂದ ಮಗುವಿನ ಜನನ ಧರ್ಮ ಸಮ್ಮತವಾಗಿರಬೇಕೆಂದು ಪಿತೃಪ್ರಧಾನ ಪದ್ಧತಿ ಆ ಗೃಹಪೂರ್ವಕವಾಗಿ ಬಯಸುತ್ತದೆ. ಇಲ್ಲಿ ಮಗುವಿನ ತಂದೆ ಯಾರೆಂಬ ಪ್ರಶ್ನೆ ಬಲು ಮುಖ್ಯದ್ದು. ಯಾಕೆಂದರೆ ಆ ಮಗು ಮುಂದೆ ತನ್ನ ಮನೆತನದ ಕೀರ್ತಿ ಗೌರವ ಹಾಗೂ ಆಸ್ತಿಗಳಿಗೆ ನ್ಯಾಯಬದ್ಧವಾರಸುದಾರನಾಗಲಿರುವವನು. ಹೀಗಾಗಿ ಹೆಣ್ಣಿನ ಲೈಂಗಿಕ ಸಂಬಂಧವೆಂದರೆ ಹದ್ದುಬಸ್ತಿಗೊಳಪಡಲೇ ಬೇಕಾದ ವಿಷಯ.

ವಿವಾಹ ಪೂರ್ವದಲ್ಲಿಯೂ ಅಂದರೆ ತವರಿನಲ್ಲಿಯೂ ಆಕೆ ಒಂದು ಅಂಕೆಯೊಳಗೆ ಬೆಳೆದು ಬರುತ್ತಾಳಷ್ಟೆ. ಎಳೆವಯಸ್ಸಿನಲ್ಲಿಯೇ ಹಲವೊಮ್ಮೆ ಇನ್ನೂ ಋತುಮತಿಯರಾಗುವ ಮೊದಲೇ, ಅವಳಿಗೆ ಮದುವೆ ಮಾಡಿ ಬಿಡುವುದು ಇನ್ನೊಂದು ಬಗೆಯಲ್ಲಿ ಅವಳ ಪಾವಿತ್ರ್ಯವನ್ನು ಕಾಪಾಡಿಕೊಳ್ಳುವ ಮಾರ್ಗ. ವಿವಾಹದ ಕನಿಷ್ಠ ವಯಸ್ಸನ್ನು ಕಾನೂನು ನಿಗಧಿಗೊಳಿಸಿದ್ದರೂ ಇವತ್ತಿಗೂ ಇಂಡಿಯಾದಲ್ಲಿ ಬಾಲ್ಯ ವಿವಾಹದ ಸಮಸ್ಯೆ ಪರಿಹಾರವಾಗದೇ ಉಳಿದಿದೆ. ಆದಿಕಾಲದಿಂದ ಹರಿದು ಬಂದ ಘನ ಪರಂಪರೆ ಎದುರು ಕಾನೂನು ವಿಧಿಸುವ ಪ್ರತಿಬಂಧಕಗಳು ಎಲ್ಲಿ. ಕೇವಲ ಒಂದು ಶತಮಾನದ ಕೆಳಗೆ ಬಾಲ್ಯವಿವಾಹವೆಂಬುದು ಅತಿ ಸಾಮಾನ್ಯವಾಗಿದ್ದ ಪದ್ಧತಿಯಾಗಿತ್ತು. ಈಗ ಎಷ್ಟೋ ಪಾಲು ಅಳಿಸಿಹೋಗಿದೆ.

**ಅಡಿಟಿಪ್ಪಣಿಗಳು**

೧. ವೈದೇಹಿ(ಅನು), **ಭಾರತದಲ್ಲಿ ಹೆಂಗಸರ ಸ್ಥಿತಿಗತಿ ಅಧ್ಯಯನ,** ಫೆಬ್ರವರಿ ೧೯೮೫.

೨. ಶಾರದಾ ಶಾಮಣ್ಣ, **ಭಾರತೀಯ ಮಹಿಳೆ ಪೌರಾಣಿಕ ಹಿನ್ನೆಲೆಯಲ್ಲಿ ತೌಲನಿಕ ವಿಮರ್ಶೆ,** ೧೯೯೯

೩. ಡಾ.ಆರ್.ಇಂದಿರಾ, **ಮಹಿಳೆ ಮತ್ತು ಕೌಟುಂಬಿಕ ಹಿಂಸೆ,** ೨೦೦೦.

ಅಧ್ಯಾಯ ೪

# ಆಧುನಿಕ ಭಾರತದಲ್ಲಿ ವಿವಾಹ ಸಂಸ್ಥೆಯ ನವೀಕರಣ- ಆಧುನಿಕ ವಿವಾಹ ಸಂಸ್ಥೆಯಲ್ಲಿಯ ಮುಂದುವರಿದ ಮಹಿಳೆಯ ಸ್ಥಾನಮಾನದ ಪ್ರಶ್ನೆ

ವಿವಾಹ ಎಂದರೆ ಒಂದು ಗಂಡು ಮತ್ತು ಹೆಣ್ಣಿನ ನಡುವೆ ಮಾತ್ರ ಏರ್ಪಾಡಾಗುವಂತ ಒಂದು ಸಂಬಂಧವಲ್ಲ. ಈ ಸಂಬಂಧದಲ್ಲಿ ಎರಡು ಅಥವಾ ಹೆಚ್ಚಿನ ಸಂಖ್ಯೆಯ ಕುಟುಂಬಗಳೂ ಕೂಡ ಬಂಧಿತವಾಗುತ್ತವೆ. ವಿವಾಹ ಎನ್ನುವ ಸಂಸ್ಥೆಯ ಗುರಿ ಸ್ತ್ರೀ ಪುರುಷರಿಬ್ಬರ ನಡುವಣ ಸಂಬಂಧಕ್ಕೆ ಸಾಮಾಜಿಕ ಮಾನ್ಯತೆಯನ್ನು ನೀಡುವುದಷ್ಟೇ ಅಲ್ಲ. ವ್ಯಕ್ತಿಗಳನ್ನು ಕುಟುಂಬ ಎನ್ನುವ ವ್ಯವಸ್ಥೆಯ ಒಳಗೆ ಬಂಧಿಸುವ ಹಾಗೂ ಮಕ್ಕಳ ಪಾಲನೆ-ಪೋಷಣೆ ಜವಾಬ್ದಾರಿಯನ್ನು ತೆಗೆದುಕೊಳ್ಳುವಂತೆ ದಂಪತಿಗಳ ಮೇಲೆ ಸಾಮಾಜಿಕ ಒತ್ತಡವನ್ನು ತರುವಂಥ ಒಂದು ಸಾಧನವಾಗಿಯೂ ಆಗಿದೆ. ಇಂದಿಗೂ ವಿವಾಹದ ವಿಷಯದಲ್ಲಿ ಅಧಿಕ ಪ್ರಮಾಣದಲ್ಲಿ ಪುರುಷ ಲಕ್ಷಣ ಹೊಂದಿರುವುದೇ ಕಂಡುಬರುತ್ತಿದೆ.

ಕೆಲವೇ ದಶಕಗಳ ಹಿಂದೆ ಇದ್ದ, 'ಮಹಿಳೆ ಸ್ಥಾನಮಾನ' ಎಂಬ ಅಭಿಪ್ರಾಯ ಮಾಯವಾಗಿ, ಇಂದು ಶಿಕ್ಷಣ ಪಡೆದಮಹಿಳೆ ಉದ್ಯೋಗ ರಂಗಗಳಲ್ಲಿ ಪುರುಷನಿಗೆ ಸರಿಸಮಾನಾಗಿ ಕಾಣಿಸಿಕೊಳ್ಳುತ್ತಿದ್ದಾಳೆ. ಇವತ್ತು ಮಹಿಳೆಗೆ ಶಿಕ್ಷಣಬೇಕು ಅಂತ ಹೇಳುವುದು ತುಂಬ ಹಳೆಯ ಮಾತಾಗಿರಬಹುದು. ಕಾರಣ ಇಂದು ಹೆಚ್ಚಿನ ಸಂಖ್ಯೆಯ ಮಹಿಳೆಯರು ವಿದ್ಯೆ ಪಡೆಯುತ್ತಿದ್ದಾರೆ. ಆದರೂ ಮಹಿಳೆಯರ ಸಮಸ್ಯೆಗಳೇನು ಕಡಿಮೆಯಾಗಲಿಲ್ಲ. ವರದಕ್ಷಿಣೆಯ ಸಾವು, ಅತ್ಯಾಚಾರ ಹಲವು ಹತ್ತು ರೀತಿಯ ಮಹಿಳಾ ಶೋಷಣೆ ದಿನದಿನಕ್ಕೆ ಹೆಚ್ಚಾಗುತ್ತಲಿದೆ. ಇದಕ್ಕೆ ವಿದ್ಯವಂತ ಮಹಿಳೆಯರು ಬಲಿಯಾಗುತ್ತಿರುವುದು ಸೋಜಿಗವಾದರೂ ಸತ್ಯ ಸಂಗತಿಯಾಗಿದೆ. ಶಿಕ್ಷಣವೆಂದರೆ ಓದು-ಬರಹ ಮಾತ್ರವಲ್ಲ ವಿದ್ಯಾರ್ಥಿಯ ಬೌದ್ಧಿಕ, ಮಾನಸಿಕ ಮತ್ತು ಬೌದ್ಧಿಕ ಹಾಗೂ ಆಧ್ಯಾತ್ಮಿಕ ವಿಕಾಸದೊಂದಿಗೆ ನಾವು ಕಲಿತ ಶಿಕ್ಷಣವು ಈ ಜಗತ್ತಿನಲ್ಲಿ ಚೆನ್ನಾಗಿ ಬದುಕಲು, ಗೌರವದಿಂದ ಬದುಕಲು ಸಹಕಾರಿಯಾಗಬೇಕು. ಸ್ವಾಭಿಮಾನ, ಸ್ವಾವಲಂಬಿ, ಆತ್ಮವಿಶ್ವಾಸ, ಆತ್ಮಗೌರವದಂಥ ಸದ್ಗುಣಗಳು ಪ್ರತಿಯೊಬ್ಬರಲ್ಲಿ ಅಳವಡುವಂತಾಗಬೇಕು.[೧]

ಭಾರತ ಸಂವಿಧಾನ ಸ್ತ್ರೀಪುರುಷರೆಂಬ ಬೇದಭಾವವಿಲ್ಲದೆ ಭಾರತಚ ಎಲ್ಲಾ ನಾಗರಿಕರೂ ಸಮಾನ ಸ್ಥಾನಮಾನ ಅವಕಾಶಗಳು, ಕಾನೂನಿನ ದೃಷ್ಟಿಯಲ್ಲಿ ಸಮಾನ ರಕ್ಷಣೆ ನೀಡಿದೆ. ಮಹಿಳೆಯರ ಹಿತಾಸಕ್ತಿಯನ್ನು ಕಾಪಾಡಲು ಹಾಗೂ ಅವರ ಸ್ಥಾನಮಾನದಲ್ಲಿ ಸಾಮಾಜಿಕ-ಆರ್ಥಿಕ ಬದಲಾವಣೆಗಳನ್ನು ತರಲು ಅನೇಕ ಕಾನೂನುಗಳನ್ನು ರಚಿಸಿದೆ. ಆದರೂ ಮಹಿಳೆಯ ವಿರುದ್ಧ ನಡೆಯುವ ಹಿಂಸೆ ಹಾಗೂ ಅಪರಾಧಗಳ ಸಂಖ್ಯೆ ಹೆಚ್ಚಾಗುತ್ತಲೇ ಇದೆ.

ಬ್ರಿಟಿಷರು ಭಾರತವನ್ನು ಆಕ್ರಮಿಸುವ ವೇಳೆಗೆ ಭಾರತೀಯ ಸಮಾಜದ ಅನಿಷ್ಟ ಪರಂಪರೆಗಳು ಬೇರೂರಿ ವಿಸ್ತೃತವಾಗಿ ಅಂಧಶ್ರದ್ಧೆ ಬೆಳೆದಿತ್ತು. ಬಾಲ್ಯವಿವಾಹ, ಬಹುಪತ್ನಿತ್ವ, ದೇವದಾಸಿಪದ್ಧತಿ, ವಿಷಮವಿವಾಹ, ವರದಕ್ಷಿಣೆ, ಅನಕ್ಷರತೆ ಮುಂತಾದ ಅನಿಷ್ಟ ಪದ್ಧತಿಗಳು ಬಂದಿದ್ದವು.

ಸ್ವಾತಂತ್ರ್ಯ ಪೂರ್ವದಲ್ಲಿ ಅಂದರೆ ೨೦ನೇ ಶತಮಾನದ ಆರಂಭದ ಎರಡು ದಶಕಗಳಲ್ಲಿ ಸ್ತ್ರೀಯರ ಕಲ್ಯಾಣಕ್ಕಾಗಿ 'ವಿಧವಾಗೃಹ'ಗಳು ಸ್ಥಾಪಿಸಲ್ಪಟ್ಟವಲ್ಲದೇ ಹಲವಾರು ಕಾನೂನುಗಳು ಬಾಲ್ಯವಿವಾಹ ಪದ್ಧತಿಯನ್ನು ವಿರೋಧಿಸಿ ಮತ್ತು ವಿಧವಾ ವಿವಾಹವನ್ನು ಪ್ರೋತ್ಸಾಹಿಸಿ ಪಾಸಾದವು. ಸ್ವಾತಂತ್ರ್ಯಾನಂತರ ಭಾರತೀಯ ಸಂವಿಧಾನವು ಸ್ತ್ರೀಪುರುಷರಲ್ಲಿ ಅಸಮಾನತೆಗೆ ಆದ್ಯತೆಯನ್ನು ನೀಡಿದೆ. ಅನೇಕ ಕಾನೂನುಗಳನ್ನೂ ನಿರ್ಮಿಸಿ ಈ ದಿಶೆಯಲ್ಲಿ ಸಾಕಷ್ಟು ಮುಂದಿನ ಹೆಜ್ಜೆಯನ್ನಿಟ್ಟಿದೆ. ಸ್ತ್ರೀ ಪುರುಷರಿಬ್ಬರಿಗೂ ಸಮಾನ ಸ್ಥಾನಮಾನವನ್ನು ಒದಗಿಸಿಕೊಟ್ಟಿದೆ. ಮಹಿಳೆಯರ ರಕ್ಷಣೆ ಮತ್ತು ಕಲ್ಯಾಣಕ್ಕಾಗಿ ವಿಶೇಷ ಯೋಜನೆಗಳನ್ನು ಹಲವಾರು ಕಾನೂನುಗಳನ್ನು ರೂಪಿಸಿದೆ. ೧೯೨೭ರಲ್ಲಿಯೇ ಅಖಿಲಭಾರತ ಸ್ತ್ರೀಯರ ಪರಿಷತ್ತು ಸ್ಥಾಪಿಸಲ್ಪಟ್ಟಿತು.[೨] ಇನ್ನು ಸ್ತ್ರೀಯರ ಕಲ್ಯಾಣಕ್ಕಾಗಿಯೇ ನಿರ್ಮಿತವಾದ ಕೆಲವು ಮಹತ್ವದ ಕಾನೂನುಗಳೆಂದರೆ

೧೮೨೯ರಲ್ಲಿ ಜಾರಿಗೆ ಬಂದ ಸತಿಸಹಗಮನ ನಿರ್ಮೂಲನಾ ಕಾಯ್ದೆ, ಈ ಕಾನೂನು ಸತಿಸಹಗಮನದ ಕ್ರೂರವಾದ ಪದ್ಧತಿಯನ್ನು ನಿಷೇಧಿಸುತ್ತದೆ.೧೮೫೬ರಲ್ಲಿ ಪಾಸಾದ ವಿಧವಾ ವಿವಾಹ ಕಾನೂನು. ಈ ಕಾನೂನಿನ ಮುಖಾಂತರ ವಿಧವೆಯರಿಗೆ ಪುನರ್ ವಿವಾಹಕ್ಕೆ ಅವಕಾಶವನ್ನು ಕಲ್ಪಿಸಲಾಯಿತು.

## ೧೯೫೬ ಅಲ್ಪವಯಿ ಮತ್ತು ಸಂರಕ್ಷಣಾ ಕಾಯ್ದೆ

ಈ ಕಾಯ್ಕೆಯು ಅಲ್ಪವಯಿಗಳು ಯಾರು ಅವರನ್ನು ಸಾಕುವ ರಕ್ಷಿಸುವ ಹಕ್ಕು ಯಾರಿಗೆ ಇದೆ ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಕಾಯಿದೆಗೆ ಅನುಗುಣವಾಗಿ ಗಂಡನು ಮರಣ ಹೊಂದಿದರೆ ಹಿಂದೂ ಧರ್ಮದಿಂದ ಬೇರೆ ಧರ್ಮಕ್ಕೆ ಮತಾಂತರ ಹೊಂದಿದ್ದರೆ ಅಥವಾ ಸನ್ಯಾಸಿಯಾಗಿದ್ದರೆ, ಹೆಂಡತಿಯು ಅಲ್ಪವಯಸ್ಕರಾದ ಮಕ್ಕಳ ಸಂರಕ್ಷಕರನ್ನು ನೇಮಿಸುವ ಹಕ್ಕನ್ನು ಪಡೆದಿರುತ್ತಾಳೆ. ಈ ಕಾಯಿದೆಯು ಕುಟುಂಬದಲ್ಲಿ ಪುರುಷರಂತೆ ಸ್ತ್ರೀಯರಿಗೂ ಸಮಾನ ಹಕ್ಕನ್ನು ಒದಗಿಸಿತು.

೧೯೫೬ರ ಹಿಂದೂ ದತ್ತಕ ನಿರ್ವಹಣೆ ಕಾಯ್ದೆ ಇವುಗಳನ್ನು ಪಾಸುಮಾಡಲಾಯಿತು. ಈ ಕಾಯ್ದೆಯ ಸ್ತ್ರೀಯರಿಗೂ ದತ್ತಕ ತೆಗೆದುಕೊಳ್ಳುವ ಹಾಗೂ ಜೀವನಾಂಶವನ್ನು ಪಡೆಯುವ ಅಧಿಕಾರ ಕಲ್ಪಿಸಿಕೊಟ್ಟಿತು. ಇದರ ಪ್ರಕಾರ ಗಂಡನ ಮರಣ, ಮತಾಂತರ ಹಾಗು ಸನ್ಯಾಸಿಯಾಗಿದ್ದರೆ ಹೆಂಡತಿಯು ಬಾಲಕ ಅಥವಾ ಬಾಲಕಿಯನ್ನು ದತ್ತಕ ತೆಗೆದುಕೊಳ್ಳಬಹುದು.

೧೯೫೬ರ ಸ್ತ್ರೀಯರಲ್ಲಿ ಅನೈತಿಕ ತಡೆಗಟ್ಟುವ ಕಾನೂನು ಈ ಕಾನೂನು ಹೆಣ್ಣುಮಕ್ಕಳು ವೇಶ್ಯಾವೃತ್ತಿಗೆ ಮಾರುಹೋಗುವುದನ್ನು ತಡೆಗಟ್ಟುತ್ತದೆ. ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಕಾಯ್ದೆಯನ್ನು ಜಾರಿಗೆ

ತರಲಾಯಿತು. ಇದರ ಪ್ರಕಾರ ಪ್ರತ್ಯಕ್ಷವಾಗಿ ಅಥವಾ ಅಪ್ರತ್ಯಕ್ಷವಾಗಿ ವರದಕ್ಷಿಣೆ ಸ್ವೀಕರಿಸುವುದಾಗಲಿ ಅಥವಾ ಕೊಡುವುದಾಗಲಿ ಅಪರಾಧವೆಂದು ಪರಿಗಣಿಸಲಾಗುವುದು.

೧೯೬೧ ವೈದ್ಯಕೀಯ ಗರ್ಭಪಾತ ಕಾನೂನು(medical Termination of pregnancy Act)

೧೮೬೯ರ ಭಾರತೀಯ ವಿಚ್ಛೇದನಾ ಕಾನೂನು

ಈ ಕಾನೂನು ಕೆಲವು ಸಂದರ್ಭಗಳಲ್ಲಿ ವಿವಾಹ ವಿಚ್ಛೇದನಕ್ಕೆ ಅವಕಾಶ ಕಲ್ಪಿಸಿತು.

೧೮೭೨ರ ಹಿಂದೂ ವಿಶೇಷ ವಿವಾಹ ಕಾಯ್ದೆ.

ಈ ಕಾನೂನು ಅಂತರ್ ಜಾತಿಯ ವಿವಾಹಕ್ಕೆ ಮನ್ನಣೆ ನೀಡಿತು.

೧೮೭೪ರಲ್ಲಿ ವಿವಾಹಿತ ಮಹಿಳಾ ಆಸ್ತಿಯ ಹಕ್ಕು. ಕಾನೂನು ಈ ಕಾನೂನಿನ ಪ್ರಕಾರ ಮಹಿಳೆಯ ಸ್ವಂತ ಗಳಿಕೆಯು ಅವಳ ಸ್ತ್ರೀಧನವೆಂದು ಪರಿಗಣಿಸಲ್ಪಡುವುದು.

೧೮೮೧ರ Age of consent Act.

ಈ ಕಾನೂನಿನ ಪ್ರಕಾರ ಬಾಲಕೀಯ ವಿವಾಹಕ್ಕೆ ಕನಿಷ್ಠ ವಯಸ್ಸು ೧೨ ವರ್ಷ ಎಂದು ನಿಗಧಿ ಪಡಿಸಲಾಯಿತು.

೧೯೨೯ರ ಬಾಲ್ಯವಿವಾಹ ನಿಷೇಧಿಸಿದ ಶಾರದಾ ಆ್ಯಕ್ಟ್

ಇದರ ಪ್ರಕಾರ ಬಾಲಕಿಯ ವಿವಾಹದ ಕನಿಷ್ಠ ವಯಸ್ಸು ೧೪ ವರ್ಷಕ್ಕೆ ಏರಿಸಲಾಯಿತು.

೧೯೩೭ರ ಕಾನೂನು, ವಿಧವೆಗೂ ಆಸ್ತಿಯ ಮೇಲೆ ಪೂರ್ಣ ಹಕ್ಕು ಕೊಡುವಂತೆ ಮಾಡಿತು.

೧೯೪೮(minimum, age Act) ಹಿಂದೂ ಕನಿಷ್ಠ ವೇತನ ಕಾನೂನು - ಈ ಇದರ ಪ್ರಕಾರ ಕಾರ್ಖಾನೆಗಳಲ್ಲಿ ಸ್ತ್ರೀ ಪುರುಷರಿಬ್ಬರಿಗೂ ಸಮಾನವೇತನ ಇತರ ಸೌಲಭ್ಯಗಳನ್ನು ಒದಗಿಸಲಾಯಿತು. ಮಹಿಳೆಯರಿಗೆ ಗಣಿಗಳಲ್ಲಿ ಮತ್ತು ರಾತ್ರಿಯ ವೇಳೆಯಲ್ಲಿ ಕೆಲಸವನ್ನು ನಿಷೇಧಿಸಲಾಯಿತು.

**೧೯೫೫ರ ಹಿಂದೂ ವಿವಾಹ ಕಾಯ್ದೆ**

ಇದರ ಪ್ರಕಾರ ಏಕಪತ್ನಿತ್ವವನ್ನು ಜಾರಿಗೊಳಿಸಲಾಯಿತು. ಮತ್ತು ವಿವಾಹದ ವಯಸ್ಸು ಹುಡುಗಿಗೆ ೧೮ ವರ್ಷ ಮತ್ತು ಹುಡುಗನಿಗೆ ೨೧ ವರ್ಷ ಎಂದು ಸ್ಪಷ್ಟಪಡಿಸಲಾಯಿತು.

೧೯೫೬ರಲ್ಲಿ ಹಿಂದೂ ಪಿತ್ರಾರ್ಜಿತ ಆಸ್ತಿಯ ಅಧಿಕಾರ ಕಾಯ್ದೆ ಇದರ ಪ್ರಕಾರ ಹೆಣ್ಣು ಮಕ್ಕಳಿಗೂ ತಂದೆಯ ಆಸ್ತಿಗೆ ಉತ್ತರಾಧಿಕಾರತ್ವದ ಅಧಿಕಾರವನ್ನು ಕಲ್ಪಿಸಿಕೊಡಲಾಯಿತು. ನಮ್ಮ ನಾಡಿಗೆ ಸ್ವಾತಂತ್ರ್ಯ

ಬಂದು ಐವತ್ತೇಳು ವರ್ಷಗಳೇ ಸಂದರೂ, ಮಹಿಳೆಯರು ಮಾತ್ರ ಅತ್ಯಾಚಾರಕ್ಕೆ, ಹಿಂಸೆ, ಕ್ರೌರ್ಯ ಜೀವಂತದಹನಕ್ಕೆ ಗುರಿಯಾಗುತ್ತಲೇ ಇದ್ದಾರೆ. ೨೦ನೇ ಶತಮಾನದಲ್ಲಿ ಸಮಾಜ ಜೀವನದ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಕಾನೂನಿನ ಕ್ಷೇತ್ರಗಳಲ್ಲಿ ಉಂಟಾದ ಬದಲಾವಣೆಗಳು ಮಹಿಳೆಯರ ಸ್ಥಾನಮಾನದಲ್ಲಿ ಯಾವುದೇ ಬದಲಾವಣೆಗಳನ್ನು ತರಲಿಲ್ಲ ಏಕೆ ಎಂಬುದು ನಿಜಕ್ಕೂ ಯೋಚಿಸಬೇಕಾದ ಸಂಗತಿ. ಇವುಗಳಿಂದ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಕೇವಲ ಕಾನೂನುಗಳಾಗಲೀ, ಕಾರ್ಯನೀತಿಗಳಾಗಲೀ, ಸಮಾಜದಲ್ಲಿ ಅಪೇಕ್ಷಿತ ಬದಲಾವಣೆಯನ್ನು ತರಲು ಸಾಧ್ಯವಿಲ್ಲ. ಮಹಿಳೆಯರಲ್ಲಿ ಈ ಬಗ್ಗೆ ಜಾಗೃತಿ ಮೂಡಿಸಬೇಕು ಹಾಗೂ ಬದಲಾವಣೆಯನ್ನು ತರಬೇಕೆಂಬ ಸಾಮಾಜಿಕ ಕಳಕಳಿ, ಸಂಕಲ್ಪವಿರಬೇಕು. ಆಗ ಮಾತ್ರ ಮಹಿಳೆಯರ ಸ್ಥಿತಿ ಸುಧಾರಿಸಲು ಸಾಧ್ಯ.

## ಆಧುನಿಕ ವಿವಾಹ ಸಂಸ್ಥೆಯಲ್ಲಿಯ ಮುಂದುವರಿದ ಮಹಳೆಯ ಸ್ಥಾನಮಾನದ ಪ್ರಶ್ನೆ

ಪುರಾತನ ಕಾಲದಿಂದಲೂ ಹೆಣ್ಣನ್ನು ಬೆಳೆಸುವ ರೀತಿಯಲ್ಲಿ ತಾರತಮ್ಯ ಮಾಡಲಾಯಿತು. ಸ್ತ್ರೀಯಾದವಳು ಬಾಲ್ಯಾವಸ್ಥೆಯಲ್ಲಿ ತಂದೆಯ ಯೌವ್ವನದಲ್ಲಿ ಸಹೋದರನ ಅಥವಾ ಗಂಡನ, ಮುಪ್ಪಾವಸ್ಥೆಯಲ್ಲಿ ಪುತ್ರನ ರಕ್ಷಣೆಯಲ್ಲಿರಬೇಕು. ಅವಳಿಗೆ ಸ್ವಾತಂತ್ರ್ಯ ಸಲ್ಲದು. ಸತ್ತವರ ಆತ್ಮಕ್ಕೆ ಶಾಂತಿಸಿಗಲು ಗಂಡು ಮಗುವಿನಿಂದಲೇ ಸಂಸ್ಕಾರವಾಗಬೇಕು. ಪೂರ್ವಜರು ಗಳಿಸಿಟ್ಟ ಆಸ್ತಿ ರಕ್ಷಿಸಲು ಹಾಗೂ ವಾರಸುದಾರರಾಗಲು ಪುರುಷನೇ ಬೇಕು. ಇಳಿ ವಯಸ್ಸಿನಲ್ಲಿ ತಂದೆ-ತಾಯಿ ವೃದ್ಧರನ್ನು ನೋಡಲು ಮಗನೇ ಬೇಕು. ಕೌಟುಂಬಿಕ ಜವಾಬ್ದಾರಿಗಳನ್ನು ಹೊತ್ತು ಇತರರನ್ನು ರಕ್ಷಿಸಲು ಪುರುಷನೇ ಆಗಬೇಕೆಂಬ ಆಸಕ್ತಿಗಳು ಬೆಳೆದು ಬಂದು, ಸ್ತ್ರೀಯರನ್ನು ನಗಣ್ಯ ಮಾಡಲಾಯಿತು. ಹೀಗೆ ಸ್ತ್ರೀ ಬಗ್ಗೆ ಬೆಳೆದ ಭಾವನೆಗಳು ಸ್ತ್ರೀಗೆ ಪತಿಯೇ ಪರದೈವ, ಆತನೇ ಸರ್ವಸ್ವ. ಅವನು ಬಹುಪತ್ನಿತ್ವ ಪಡೆದರೂ ಅಡ್ಡಿಯಿಲ್ಲ ಇವಳು ಮಾತ್ರ "ಏಕಪತಿತ್ವ" ಹೊಂದಲಿ ಎಂದು ದ್ವಿಮುಖ ನ್ಯಾಯ ನೀಡಿತು. "ಮನುಸ್ಮೃತಿ" ಅಷ್ಟೇ ಸ್ತ್ರೀ ವಿದ್ಯಾಭ್ಯಾಸಕ್ಕೂ ಅವಕಾಶ ಸಿಗದೇ ಬಾಲ್ಯವಿವಾಹ, ಸತಿಪದ್ಧತಿ, ವಿಧವಾ ವಿವಾಹ ವಿರೋಧವ್ಯಕ್ತವಾಯಿತು. ಸ್ತ್ರೀ ಯೋಚಿಸಲೂ ಅನರ್ಹಳು. ಹೆಣ್ಣು ಜನಿಸಿದರೆ ಹುಣ್ಣು, ಅವಳು ಹುಟ್ಟಿದ ಕುಟುಂಬ ದುಃಖ ಸೂಚಕ ಎಂಬ ಭಾವನೆಗಳು ಅವಳನ್ನು ಅಲಕ್ಷ್ಯಕ್ಕೀಡು ಮಾಡಿದವು.

ಹೆಣ್ಣಿಗೆ ಭಾರತೀಯ ಸಂಸ್ಕೃತಿಯಲ್ಲಿ ವಿಶಿಷ್ಟವಾದ ಸ್ಥಾನಕೊಟ್ಟಿದ್ದಾರೆ. ಮಹಿಳೆಯರಿಗಿದ್ದ ಈ ಗೌರವ ಜಗತ್ತಿನ ಇನ್ಯಾವ ಸಂಸ್ಕೃತಿಯಲ್ಲಿಯೂ ಕಂಡುಬಂದಿಲ್ಲ. ಹೂ, ಕುಂಕುಮ, ಅರಿಷಿಣ, ಮಾಂಗಲ್ಯ, ಬಳೆ, ಸೀರೆ, ಕಾಲುಂಗುರ, ಮೂಗುತಿ ಹೀಗೆ ಪವಿತ್ರದ್ಯೋಕ್ತಗಳೊಂದಿಗೆ ಹೆಣ್ಣನ್ನು ಗುರುತಿಸುವ ಬಗೆ, ರೀತಿ ಮೈಝುಮ್ಮೆನ್ನುತ್ತದೆ. ಪ್ರಚೀನ ಕಾಲದಿಂದಲೂ ನಾರಿ ದೇವತೆಯಂತೆ ಪೂಜಿಸಲ್ಪಟ್ಟಿದ್ದಾಳೆ. ಅದೇ ರೀತಿ "ತೊಟ್ಟಿಲನ್ನು ತೂಗುವ ಕೈ ಜಗತ್ತನ್ನೇ ತೂಗಬಲ್ಲದು" ಎಂಬ ಉಕ್ತಿಯಂತೆ ಏನೆಲ್ಲವನ್ನು ಸಾಧಿಸಬಲ್ಲಳು.

ಹೆಣ್ಣು ಅದಕ್ಕಾಗಿಯೇ ಮಾತೃದೇವೋಭವ ಎಂದು ತಾಯಿಯನ್ನು ದೇವರ ಸಮನಾಗಿ ನಿಲ್ಲಿಸಿದ್ದಾರೆ. ಒಂದು ಕೆಟ್ಟ ಕಾರ್ಯಕ್ಕೂ ಹೆಣ್ಣು ಯಾವ ರೀತಿ ಕಾರಣಳಾಗಬಲ್ಲಳು ಎನ್ನುವುದಕ್ಕೆ ಮಹಾಭಾರತ, ರಾಮಾಯಣ ದಂಥವುಗಳೇ ನಿದರ್ಶನವಾಗಿವೆ. ಹೆಣ್ಣು ತಾಯಿಯಾಗಿ, ತಂಗಿಯಾಗಿ, ಮನದನ್ನೆಯಾಗಿ, ಮಗಳಾಗಿ ಮನೆ, ಮನ, ಮಾನವ ಜಗತ್ತನ್ನೇ ಬೆಳಗಬಲ್ಲಳು. ನೀನು ನನ್ನ ಕಡೆ ನೋಡಿದರೆ ನಾನು ನಿನ್ನ ಕಡೆ ನೋಡುತ್ತೇನೆ ಎನ್ನುವ ಹಾಗೆ ಪರಮಾತ್ಮನ ಆರಾಧಿಸಿ ಅವನಿಗಾಗಿ ಹಂಬಲಿಸಿ ಮೊರೆಯಿಡುವವರ ಕಣ್ಣಿಗೆ ಮಾತ್ರ ಕಾಣುತ್ತಾ ಪರಮಾತ್ಮನು ಎಲ್ಲರಿಗೂ ಎಲ್ಲೆಡೆಯೂ ಕಾಣಲು ಆಗದ ಕಾರಣ ದೇವಸ್ವರೂಪಿಯಾದ ಜನನಿಯನ್ನು ಸೃಷ್ಟಿಸಿದನಂತೆ.[೩] ಗಂಡುಮಕ್ಕಳನ್ನು ಹೆತ್ತವಳು ಹೆಣ್ಣಿಲ್ಲದಿದ್ದರೆ ಅವಳು ಸತ್ಯವಾಗಿಯೂ ಬಂಜೆಯಂತೆ ಎನ್ನುವ ಮಾತು ಎಷ್ಟೊಂದು ಅರ್ಥಪೂರ್ಣವಾಗಿದೆ.

ಮನೆಯ ವಿಷಯಗಳಲ್ಲಿ ಹೆಣ್ಣು ಮಂತ್ರಿಯಂತೆ, ಊಟಕ್ಕೆ ನೀಡುವಲ್ಲಿ ತಾಯಿಯಂತೆ, ವಿಷಯಲೋಲುಪತೆಯಲ್ಲಿ ರಂಭೆಯಂತೆ, ತಾಳ್ಮೆಯಲ್ಲಿ ಭೂಮಿಯಂತೆ, ಚಲುವಿಕೆಯಲ್ಲಿ ಲಕ್ಷ್ಮಿಯಂತೆ, ಮನೆಯ ಕೆಲಸಕ್ಕೆ ದಾಸಿಯಂತೆ ಎಲ್ಲ ರೀತಿಯಲ್ಲೂ ಹುಟ್ಟಿದ ಮನೆಗು ಮತ್ತು ಕೊಟ್ಟಮನೆಗೂ ಶ್ರೇಯಸ್ಸನ್ನು ಬಯಸಿ ಬಾಳುವಳು. ಹೆಣ್ಣು ಮಮತಾಮಯಿ, ತ್ಯಾಗಮಯಿ, ಸಹನಶೀಲೆಯಾಗಿ ಶ್ರೀಗಂಧದಂತೆ ತನ್ನನ್ನು ತಾನು ತೇಯ್ದುಕೊಂಡು ತನ್ನವರಿಗೆ ಪರಿಮಳ ಬೀರುತ್ತಾಳೆ. ಮಹಾತ್ಮಾ ಗಾಂಧೀಜಿಯವರು ಹೇಳಿದಂತೆ ಯಾವ ಕ್ಷೇತ್ರದಲ್ಲಿ ಹೆಣ್ಣು ಇರುತ್ತಾಳೋ ಆ ಕ್ಷೇತ್ರದ ಕೆಲಸಗಳು ತುಂಬಾ ಸುಲಕ್ಷಣವಾಗಿ ಸುವ್ಯವಸ್ಥಿತವಾಗಿ ನಡೆಯುತ್ತವೆ. ಗಂಡಿನಷ್ಟೇ ಸಮಾನ ಸ್ಥಾನವನ್ನು ಸ್ತ್ರೀಗೆ ಇಂದಿನ ಕಾಲದಲ್ಲಿ ಕೊಟ್ಟಿದ್ದಾರೆ. ಹೆಚ್ಚಿನ ಮಹತ್ವದ ಸ್ಥಾನವನ್ನು ಸರಕಾರವು ಹೆಣ್ಣಿಗೆ ಕೊಡುತ್ತಿದೆ. ಉತ್ತಮ ಶಿಕ್ಷಣ, ಉದ್ಯೋಗದಲ್ಲಿ ಮೀಸಲಾತಿ ಮುಂತಾದ ಸೌಲಭ್ಯಗಳನ್ನು ದೊರಕಿಸಿ ಮಹಿಳೆ ತನ್ನ ಕಾಲಮೇಲೆ ನಿಲ್ಲುವಂತೆ ಮಾಡಿದ್ದಾರೆ. ಸ್ತ್ರೀ ಇಂದು ಎಲ್ಲ ಕ್ಷೇತ್ರದಲ್ಲೂ ಉತ್ತುಂಗ ಶಿಖರವನ್ನು ಮುಟ್ಟಿದ್ದಾಳೆ.

ರಾಮಕೃಷ್ಣ ಪರಮಹಂಸರ ಸತಿ ಶಾರದಾಮಾತೆ ವಿವೇಕಾನಂದರ ಶಿಷ್ಯೆ ಸಿಸ್ಟರ್ ನಿವೇದಿತಾ, ಮದರ್ ಥೆರಿಸಾ, ಸರೋಜಿನಿ ನಾಯಿಡು, ಕಸ್ತೂರಿಬಾ, ಇಂದಿರಾಗಾಂಧಿ ಇನ್ನೂ ಅನೇಕ ಮಹಿಳೆಯರು ಇದಕ್ಕೆ ಜೀವಂತ ಸಾಕ್ಷಿಗಳು. ಇದಲ್ಲದೆ ಧೈರ್ಯದಲ್ಲಿ ಹೆಣ್ಣು ಒಂದು ಸಾರಿದ ವೀರವನೀತೆಯರು ನಮ್ಮ ದೇಶದಲ್ಲಿ ಸಾಕಷ್ಟು ಇದ್ದಾರೆ. ಒನಿಕೆ ಓಬವ್ವ, ಕಿತ್ತೂರು ಚೆನ್ನಮ್ಮ ಝಾನ್ಸಿರಾಣಿ ಲಕ್ಷ್ಮೀಬಾಯಿ, ಬೆಳವಡಿ ಮಲ್ಲಮ್ಮ, ವೀರವನಿತೆ ದೊಡ್ಡ ಅಬ್ಬಕ್ಕೆ, ಸಣ್ಣ ಅಬ್ಬಕ್ಕ ಈ ರೀತಿಯಾಗಿ ಇನ್ನೂ ಅನೇಕರು ಇರುವರು. ಒಬ್ಬ ಪುರುಷ ಯಶಸ್ವಿಯಾಗಿದ್ದಾನೆ, ಒಂದು ಉನ್ನತಮಟ್ಟಕ್ಕೇರಿದ್ದಾನೆ ಎಂದರೆ ಅದರ ಹಿಂದೆ ಸ್ತ್ರೀಯ ಕೈವಾಡ ಇರುತ್ತದೆ ಇದು ಸತ್ಯ. ಆದರೆ ಇಂಥ ಹೆಣ್ಣು ವರದಕ್ಷಿಣೆ ಅತ್ಯಾಚಾರ ಮುಂತಾದ ಶೋಷಣೆಗೆ

ಬಲಿಯಾಗಿ ಕೊರಗುತ್ತಿದ್ದಾಳೆ. ಚಿಕ್ಕಮಕ್ಕಳು ಕೂಡಾ ಈ ಲೈಂಗಿಕ ಕಿರುಕುಳಕ್ಕೆ ಬಲಿಯಾಗುತ್ತಿದ್ದಾರೆ. ಈ ರೀತಿಯ ಶೋಷಣೆ ಯಾಕೆ? ಹೀಗೇಕೆ? ಎಂದು ಪ್ರತಿಯೊಬ್ಬ ಪುರುಷ ಯೋಚಿಸಬೇಕಾದ ವಿಷಯ. ಬಾಯಿಂದ ಮಾತನಾಡದೆ ಹೆಚ್ಚಿನ ಸಹನೆಯನ್ನು ಕೆಣಕದೆ ಅವಳಿಗೂ ಮನಸ್ಸಿದೆ ಎಂದು ಅರ್ಥಮಾಡಿಕೊಳ್ಳಬೇಕು. ಆಕೆಗೆ ತನ್ನದೇ ಆದ ಆಸೆ, ಆಕಾಂಕ್ಷೆ ಗುರಿಗಳಿವೆ ಎಂದು ತಿಳಿದುಕೊಂಡು ಅವಳ ಕನಸುಗಳಿಗೆ ಸಕಾರರೂಪ ಕೊಡುವಲ್ಲಿ ಯಶಸ್ವಿಯಾಗಿ ಅವಳ ಕನಸುಗಳನ್ನು ಬೆಳೆಸಲು ಬಿಡಬೇಕು. ಅಂದಾಗ ಆಕೆಯ ಬದುಕು ಸಾರ್ಥಕತೆಯನ್ನು ಕಾಣುತ್ತದೆ. ಎಲ್ಲಿ ಸ್ತ್ರೀಯರನ್ನು ಗೌರವದಿಂದ ಕಾಣಲಾಗುತ್ತದೋ ಅಲ್ಲಿ ದೇವತೆಗಳು ನೆಲಸಿರುತ್ತಾರಂತೆ, ಅದಕ್ಕಾಗಿ ಪವಿತ್ರಾತ್ಮಳಾದ ಸ್ತ್ರೀಯನ್ನು ಪೂಜ್ಯ ಭಾವನೆಯಿಂದ ಕಂಡು ಭವ್ಯ ಭಾರತದ ನಿರ್ಮಾಣದಲ್ಲಿ ಆಕೆಯನ್ನು ಪೂಜಿಸಿ, ಗೌರವಿಸಿ ಆಕೆಗೂ ಒಂದು ಸ್ಥಾನಕೊಟ್ಟರೆ 'ಹೆಣ್ಣುಬಾಳಿನ ಕಣ್ಣು' ಆಗುವುದರಲ್ಲಿ ಸಂದೇಹವಿಲ್ಲ.

## ಬಂದು ನಿಲ್ಲುವ ಪ್ರಶ್ನೆಗಳು ಮತ್ತು ಉಂಟಾಗುವ ಗೊಂದಲಗಳು

ಭಾರತೀಯ ಸ್ತ್ರೀಯರ ಸ್ಥಾನಮಾನಗಳಿಗೆ ಸಂಬಂಧಿಸಿದಂತೆ ಯಾವುದೇ ವಿಶ್ಲೇಷಣೆಯಲ್ಲಿ ನಮ್ಮ ಮುಂದೆ ಇನ್ನೂ ಹಲವು ಮುಖ್ಯ ಪ್ರಶ್ನೆಗಳು ಬಂದು ನಿಲ್ಲುತ್ತವೆ. ಉದಾ :

೧. ಸ್ತ್ರೀಯರ ಸ್ಥಾನಮಾನದ ಪ್ರಶ್ನೆಯನ್ನು ಪುರುಷರೊಂದಿಗಿನ ಸಮಾನತೆಯ ಹಿನ್ನೆಲೆಯಲ್ಲಿಯೇ ಪರಿಶೀಲಿಸಬೇಕೆ? ಅಥವಾ ಪುರುಷರ ಇಚ್ಛೆ ಅಥವಾ ಅನಿಸಿಕೆಗಳನ್ನು ಗಣನೆಗೆ ತಂದುಕೊಳ್ಳದೇ ಸ್ತ್ರೀಯರು ತಾವಾಗಿಯೇ ತಮ್ಮ ಮುಂದೆ ಇರಿಸಿಕೊಳ್ಳಬಹುದಾದ ಧ್ಯೇಯ, ಉದ್ದೇಶಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಬೇಕೆ?

೧. ಸ್ತ್ರಿಯರ ಸ್ಥಾನಮಾನಕ್ಕೆ ಸಂಬಂಧಿಸಿದ "ಸ್ತ್ರೀಯರ ವಿಮೋಚನೆ"(Women's liberation) ಎಂಬ ಕಲ್ಪನೆಯನ್ನು ಹೇಗೆ ಅರ್ಥೈಸಿಕೊಳ್ಳಬೇಕು? ಮಕ್ಕಳ ಲಾಲನೆ ಪಾಲನೆಯೊಂದಿಗೆ ಗೃಹಕೃತ್ಯಗಳನ್ನು ನೋಡಿಕೊಳ್ಳುವುದು ಬಹಳ "ಕೀಳುಮಟ್ಟದ ಚಟುವಟಿಕೆಗಳು" ಎನ್ನುವುದಾದರೆ, ತಮ್ಮ ಸ್ಥಾನಮಾನದ ಹೆಚ್ಚಳದ ದೃಷ್ಟಿಯಿಂದ, ಸ್ತ್ರೀಯರು ಅವುಗಳನ್ನು ಮಾಡಕೂಡದು, ಅಥವಾ ಪುರುಷರು ಅವುಗಳನ್ನು ಮಾಡುವಂತಾಗಬೇಕು.(ಇದು ಪಾಶ್ಚಿಮಾತ್ಯ ಮಹಿಳೆಯರ ಅಗ್ರಹ) ಆದರೆ ಈ ಚಟುವಟಿಕೆಗಳು ಸ್ತ್ರೀಯರಿಗೆ ಸಂತೃಪ್ತಿ ಮತ್ತು ಸಾರ್ಥಕತೆಯ ಮೂಲಸೋತ್ರವಾಗಿದ್ದಲ್ಲಿ "ವಿಮೋಚನೆ ಎಂಬುದು ಸ್ತ್ರೀಯರ ಮೇಲೆ ಪುರುಷರು ಹೇರಿರಬಹುದಾದ ಕೆಲವು ಅನಗತ್ಯವಾದವಾದ ನಿಷೇಧಗಳಿಂದ ಮುಕ್ತವಾಗುವುದನ್ನು, ಅರ್ಥಾತ್ ತಾಯ್ತನ ಮತ್ತು ಗೃಹಕೃತ್ಯಗಳಿಗೆ ಹೊರತಾದ ಇತರ ಬಗೆಯ 'ಬಂಧನಗಳಿಂದ ಮುಕ್ತವಾಗುವುದನ್ನು ಸಂಕೇತಿಸುವ ಕಲ್ಪನೆಯಾಗಬಹುದು."(ಇದು ಭಾರತೀಯ ಮಹಿಳಾ ಔನ್ನತ್ಯಕ್ಕೆ ಅನಿವಾರ್ಯವಾದುದು ಎಂಬ ವಾದವೂ ಇದೆ.)

೩. 'ಅಂತಸ್ತು' ಎಂಬುದು ನಾವು ಅದನ್ನು ನೋಡುವ ದೃಷ್ಟಿಯನ್ನೂ ಅವಲಂಬಿಸಿರುವುದರಿಂದ ಉತ್ಪನ್ನವಾಗುವ ಗೊಂದಲ ಉದಾ : ಪ್ರಚಲಿತ ಸಮಾಜದ ಸ್ತ್ರೀಯರ ಒಂದು ವರ್ಗವು ಅದೇ ಸಮಾಜದ ಇತರ ವರ್ಗಗಳ ಸ್ತ್ರೀಯರ ಅಂತಸ್ತುಗಳಿಗೆ ತಮ್ಮ ಅಂತಸ್ತನ್ನು ಹೋಲಿಸಿಕೊಳ್ಳುವಾಗ ಕಾಣುವ ಅಂತರ; ಈ ಹಿಂದೆ ಜೀವಿಸಿದ್ದ ಅದೇ ಸಮಾಜದ ಸ್ತ್ರೀ ಸಮುದಾಯದ ಅಂತಸ್ತಿನೊಂದಿಗೆ ಹೋಲಿಸಿಕೊಂಡಾಗ ಕಾಣುವ ವ್ಯತ್ಯಾಸ; ಅದೇ ಸಮಾಜದ ಪುರುಷ ವರ್ಗದ ಅಂತಸ್ತಿನೊಂದಿಗೆ ಹೋಲಿಸಿದಾಗ ಕಾಣಬರುವ ಭೇದ; ಇತರ ಸಮಾಜಗಳ ಸ್ತ್ರೀಯರಿಗೆ ಹೋಲಿಕೆ ಮಾಡಿಕೊಂಡಾಗ ಗೋಚರವಾಗುವ ವ್ಯತ್ಯಾಸ; ಮತ್ತು ಪುರುಷರು ಯಾವುದನ್ನು ಗೌರವಿಸುತ್ತಾರೋ ಅಂತಹ ಗುಣ ಗಳನ್ನು ಹೊಂದಿರಲು ಸಾಧ್ಯವಾಗುವಂತಹ ಅಂತಸ್ತಿನೊಂದಿಗೆ ಹೋಲಿಸಿದಾಗ ಕಾಣುವ ಭಿನ್ನತೆ. ಇವುಗಳು ಯಾವುದನ್ನು ಆಧಾರವಾಗಿಟ್ಟುಕೊಳ್ಳಬೇಕು?

೪. ಸ್ತ್ರೀಯರು ತಮ್ಮಲ್ಲಿ ಹೊಂದಿರಬೇಕಾದ ಗುಣಸಮುಚ್ಚಯದ ಬಗೆಗೆ ವಿಭಿನ್ನ ಸಮಾಜಗಳ ನಡುವೆ, ತಲೆಮಾರುಗಳ ನಡುವೆ ಮತ್ತು ಸ್ತ್ರೀ ಸಮುದಾಯದೊಳಗಡೆಯೇ ಇರಬಹುದಾದ ದೃಷ್ಟಿ ಭೇದದ ಸಮಸ್ಯೆ. ಈ ಪ್ರಶ್ನೆಯು ಪುನಃ ಒಂದು ನೈತಿಕ ಪ್ರಶ್ನೆಯೇ ಆಗಿರುವುದರಿಂದ ವಿಭಿನ್ನ ನೈತಿಕ ಹಿನ್ನೆಲೆಯ ಜನರಿಗೆ ಅಪರಿಹಾರ್ಯವೆಂದಿನಿಸುವುದರಲ್ಲಿ ಆಶ್ಚರ್ಯವಿಲ್ಲ.

೫. ಸ್ತ್ರೀ-ಪುರುಷರ ನಡುವೆ ಜೈವಿಕವಾದ ಅರ್ಥಾತ್ ಶಾರೀರಿಕವಾದ ವ್ಯತ್ಯಾಸಗಳಿರುವುದು ನಿಜವಾದರೂ ಅದನ್ನು ಮನೋಭಾವನೆ ಮತ್ತು ಸಹಜ ಸಾಮರ್ಥ್ಯತೆಗಳಿಗೂ ವಿಸ್ತೃತಗೊಳಿಸುವುದು ಸರಿಯೇ ಎಂಬ ಪ್ರಶ್ನೆ ಇಲ್ಲಿ ಮೂಡುವುದು. 'ತಾಯ್ತನ'ವೆನ್ನುವುದು ಮಹಿಳಾ ಶೋಷಣೆಯ ವಸ್ತುವನ್ನಾಗಿಸುವ ಪ್ರಪಂಚದಲ್ಲಿ ಮಹಿಳೆಯರು ಅವುಗಳ ವಿರುದ್ಧವೂ ದನಿಯೆತ್ತಿ ಸೆಣಸಬೇಕಾದಿತು ಎಂಬ ಪಾಶ್ಚಾತ್ಯ "ಮಹಿಳಾ ವಿಮೋಚಕ"ರ ಘೋಷಣೆಯೂ ಇಲ್ಲಿ ಗೊಂದಲವೆನಿಸದಿರದು.

೬. ಎಲ್ಲಕ್ಕಿಂತ ಮುಖ್ಯವಾಗಿ ನಮ್ಮೆದುರು ಬಂದುನಿಲ್ಲುವ ವಾಸ್ತವಿಕ ಪ್ರಶ್ನೆಗಳು ಇಂತಿವೆ. ನಮ್ಮ ನಂಬುಗೆಗಳು, ಆರಚಣೆಗಳು, ಸಂಸ್ಥೆಗಳು ಮತ್ತು ಮೌಲ್ಯಗಳು ಏನು ಹೇಳುತ್ತವೆ? ಎಲ್ಲಾ ವಿಧಿಗಳಲ್ಲೂ ಪುರುಷರೊಡನೆ ತಮಗೆ ಸರ್ವ ಸಮಾನತೆಯಿರಬೇಕೆಂದು ಆಗ್ರಹಪೂರ್ವಕ ಘೋಷಿಸುತ್ತಾ "ಸ್ತ್ರೀ ವಿಮೋಚನಾ ಆಂದೋಲನ"ದ ಹುಟ್ಟುಹಾಕಿರುವ ಪಾಶ್ಚಾತ್ಯ ಮಹಿಳಾ ಮಣಿಗಳ ಪ್ರಭಾವಕ್ಕೆ ಒಳಗಾಗಿ ಅವರ ಅಂಧಾನುಕರಣೆ ಎಂಬಂತೆ ಇಲ್ಲಿಯೂ ಅದೇ ಮಾದರಿಯ ಆಂದೋಲನವನ್ನು ಹುಟ್ಟುಹಾಕದಿರುವಂತೆ ಶಿಕ್ಷಿತ-ಜಾಗೃತ ಮಹಿಳೆಯರನ್ನು ತಡೆಯುವಲ್ಲಿ, ಅವು ಸಮರ್ಥವಾಗಬಲ್ಲವೇ? ಸ್ತ್ರೀಯರ ಸ್ತ್ರೀಯತ್ವದ ಗುಣಗಳು ಸಂಪೋಷಣೆ ಮಾಡಿ ಅವುಗಳ ಸದುಪಯೋಗ ಪಡೆಯುವಂತಹ

ಮತ್ತು ಸ್ತ್ರೀಯರ ಉತ್ಕರ್ಷಕ್ಕೆ ಮಾರಕವಾಗಬಲ್ಲಂತಹ ಅಡಚಣೆಗಳನ್ನು ಕಿತ್ತೆಸೆಯಲು ಸಾಧ್ಯವಾಗುವಂತೆ ಜೀವನ ವಿಧಾನವನ್ನು ಕಂಡುಕೊಳ್ಳಲು ನಮಗೆ ಸಾಧ್ಯವೇ? ಇವುಗಳೇ ಇಲ್ಲಿನ ಮುಖ್ಯ ಪ್ರಶ್ನೆಗಳಾಗಿದೆ.

## ಪ್ರಚಲಿತ ಸವಾಲು

ನಿಜ ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರು ಅತ್ಯಂತ ಮಹತ್ವಪೂರ್ಣ ಪಾತ್ರವನ್ನು ನಿರ್ವಹಿಸುತ್ತಾ ಬಂದಿದ್ದಾರೆ. ತಮ್ಮ ಅತ್ಯಮೂಲ್ಯವಾದ ಸ್ತ್ರೀತ್ವವನ್ನು ಬಲಿಗೊಟ್ಟುಗೊಳ್ಳದೆ ತಮ್ಮ ಸಾಮರ್ಥ್ಯ ಪ್ರತಿಭೆ, ನಿರ್ಧಾರಕ ಶಕ್ತಿ, ಅಸೀಮ ತ್ಯಾಗ ಮತ್ತು ಸಹನಶೀಲತೆಯನ್ನು ಅಭಿವ್ಯಕ್ತಗೊಳಿಸಲು ಈ ಸಮಾಜವು ಅವರಿಗೆ ಅವಕಾಶ ನೀಡಿದೆ. ಐತಿಹಾಸಿಕ ಘಟನಾವಳಿಗಳು ನಮ್ಮ ಸಾಮಾಜಿಕ ರಚನೆಯನ್ನೇ ವಿರೂಪಗೋಳಿಸಿದ್ದರೂ ಇದೀಗ ೨೦ನೇ ಶತಮಾನದಲ್ಲಿ ಸ್ವಾತಂತ್ರ್ಯ ಸಂಗ್ರಾಮವು ಮಹಿಳೆಯರ ಸಹಭಾಗಿತ್ವಕ್ಕಾಗಿ ನೀಡಿದ ಒಂದು ಹೊಸ ಅವಕಾಶವು ಹಳೆಯ ಅದೆಷ್ಟೋ(ಮಹಿಳಾ) ಅನರ್ಹತೆಗಳನ್ನು ತೊಡೆದು ಹಾಕಿದೆ. ಮುಂದುವರಿದ ಕೆಲವು ದೇಶಗಳಲ್ಲಿನ ಮಹಿಳೆಯರು ರಾಜಕೀಯ ಹಾಗೂ ಕಾನೂನಿನ ಸಮಾನತೆಗಾಗಿ ಹಲವಾರು ಶತಕಗಳ ಹಾಗೂ ದಶಕಗಳವರೆಗೆ ಹೋರಾಡಬೇಕಾಗಿ ಬಂದಿದ್ದರೆ ಭಾರತೀಯ ಮಹಿಳೆಯರು ಅಂತಹ ಸಮಾನತೆಯನ್ನು ಈ ಒಂದು ಅವಕಾಶದಿಂದ ಪಡೆಯಲು ಸಮರ್ಥರಾದರು. ಈ ಪ್ರಕ್ರಿಯೆ ಅದೇ ರೀತಿಯಲ್ಲಿ ಮುಂದುವರಿಯುವಂತೆ ನೋಡಿಕೊಳ್ಳುವುದೇ ಈಗ ನಮ್ಮ ಎದುರಿನ ಸವಾಲಾಗಿದೆ. ತಾಂತ್ರಿಕ ಪರಿವರ್ತನೆ, ನಗರೀಕರಣ, ವಿಭಕ್ತ ಕುಟುಂಬಗಳ ಹೆಚ್ಚಳ, ಉದ್ಯೋಗದ ನಿಮಿತ್ತ ಸ್ತ್ರೀಯರು-ಪುರುಷರು ಬೇರೆ ಬೇರೆಯಾಗುತ್ತಿರುವುದು. ಇವು ಐತಿಹಾಸಿಕಾವಾಗಿ ಆಗಿರಬಹುದಾದ ದಾಳಿಗಳಿಗಿಂತಲೂ ಹೆಚ್ಚಿನ ಪ್ರಭಾವ ಪರಿಣಾಮಗಳನ್ನು ಸ್ತ್ರೀ-ಪುರುಷ ಸಂಬಂಧಗಳ ಮೇಲೆ ಬೀರಬಲ್ಲ ವುಗಳಾಗಿವೆ. ಇವುಗಳ ಆಘಾತ ಎದುರಿಸುವ ಕ್ಷಮತೆಯನ್ನು ಬೆಳೆಸಿಕೊಳ್ಳುವುದು ಭಾರತೀಯ ಮಹಿಳೆಯರಿಗೆ ಇಂದಿನ ಪ್ರಸ್ತುತ ಸಮಯದ ಸವಲಾಗಿದೆ.

### ಅಡಿಟಿಪ್ಪಣಿಗಳು

೧. ಗೀತಾಕೃಷ್ಣಮೂರ್ತಿ, ಮಹಿಳೆ ಮತ್ತು ರಾಜಕಾರಣ, ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ,

ಹಂಪಿ

೨. ವೀಣಾ ಸಂಕನಗೌಡ, ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯಗಳು, ೧೯೯೪, ಪು.೮

೩. ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬

೪. ಎಚ್.ಜಯಮ್ಮ ಕರಿಯಣ್ಣ, ಹೆಣ್ಣಿನ ಸ್ಥಾನಮಾನ ಒಂದು ಪುನರವಲೋಕನ, ೨೦೦೦

೫. ಪಾರ್ವತಮ್ಮ ಲಿಂಗಶೆಟ್ಟಿ, ಹೆಣ್ಣಿನ ದೃಷ್ಟಿಯಲ್ಲಿ ಈ ಶತಮಾನ

೬. ಡಾ.ನೀಲಮ್ಮ ರತ್ನಳ್ಳಿ, ಮಹಿಳೆ ಹಲವು ಮುಖಗಳು, ಶ್ರೀ ರೇಣುಕಾ ಪ್ರಕಾಶನ, ಶಬಾಬಾದ್, ೧೯೯೭

ಅಧ್ಯಾಯ ೫

# ವಿವಾಹ ಮತ್ತು ಮಹಿಳಾ ಸಮಸ್ಯೆಗಳಿಗಿರುವ ಸಂಬಂಧ
# ಕೆಲವು ಪ್ರಮುಖ ವಿವಾಹ ಕೇಂದ್ರಿತ ಸಮಸ್ಯೆಗಳು





ಬಹು ಹಿಂದಿನಿಂದಲೂ ವಿವಾಹವೇ ಹೆಣ್ಣಿನ ಜೀವನದ ಪರಮೋಚ್ಛ ಗುರಿ ಎಂದು ನಂಬಿಸುತ್ತಾ ಬರಲಾಗಿದೆ. ಆದರೆ ಆಧುನಿಕ ವಿದ್ಯಾಭ್ಯಾಸ ಪಡೆಯಲು ಆರಂಭಿಸಿದ ಮೇಲೆ ಹಾಗೂ ಮನೆಯಿಂದಾಚೆಗೆ ಉದ್ಯೋಗವನ್ನು ಅರಸತೊಡಗಿದಂತೆ ವಿವಾಹವೊಂದೇ ಹೆಣ್ಣಿನ ಜೀವನ ಧ್ಯೇಯ ಎಂಬ ಭಾವನೆ ಬದಲಾಗತೊಡಗಿದೆ. ವಿವಾಹ ಹೆಣ್ಣಿನ ಜೀವನ ತೊಡಕು ಎನ್ನುವಷ್ಟರ ಮಟ್ಟಿಗೆ ಕೆಲವೊಮ್ಮೆ ಆಲೋಚಿಸುವುದೂ ಉಂಟು. ಈ ಎರಡೂ ಅಂಶಗಳನ್ನು ಬದಿಗಿರಿಸಿ ನೋಡಿದಾಗ ಹೆಣ್ಣಾಗಲೀ, ಗಂಡಾಗಲೀ 'ವಿವಾಹ' ಎನ್ನುವುದು ಜೀವನದ ಒಂದು ಸಂಸ್ಕಾರವಾಗಿ ಅತ್ಯವಶ್ಯ ಎಂಬುದನ್ನು ಒಪ್ಪಿಕೊಳ್ಳಬಹುದು. ಆಶ್ರಮಧರ್ಮದಲ್ಲಿ ಮುಖ್ಯವಾದ ಗೃಹಸ್ಥಧರ್ಮಕ್ಕೆ ವಿವಾಹವೇ ತಳಹದಿಯಾಗಿದೆ. ಗೃಹಸ್ಥಾಶ್ರಮದಲ್ಲಿ ಗೃಹಿಣಿಗೆ ಅತಿ ಮಹತ್ವದ, ಗೌರವದ ಸ್ಥಾನವಿರುವುದನ್ನು ಅಲ್ಲಗೆಳೆಯುವಂತಿಲ್ಲ ಆದರೆ ಹೆಣ್ಣು, ಗಂಡು ಪರಸ್ಪರ ಒಪ್ಪಿ, ಪ್ರೀತಿ ವಿಶ್ವಾಸಗಳಿಂದ ಕೂಡಿ ಜೀವಿಸಲು ನಾಂದಿಯಾಗಬೇಕಾದ ವಿವಾಹ; ಇತ್ತೀಚಿನ ದಿನಗಳಲ್ಲಿ ಬಹುದೊಡ್ಡ ಸಮಸ್ಯೆಯಾಗಿ ಪರಿಣಮಿಸಿರುವುದು ವಿಪರ್ಯಾಸ. ಗಂಡು ಹೆಣ್ಣು ವಿದ್ಯಾವಂತರಾದರೆ, ಪರಸ್ಪರ ತಿಳುವಳಿಕೆಯಿಂದ ಸಂಸಾರ ಸುಖಮಯವಾಗುತ್ತದೆ ಎಂಬ ನಂಬಿಕೆಯೂ ಇಂದಿನ ದಿನಗಳಲ್ಲಿ ಭ್ರಮೆ ಎನ್ನಿಸಿದೆ. ಆತ್ಮ ಸಂಸ್ಕಾರವೇ ಬೇರೆ, ವಿದ್ಯೆಯೇ ಬೇರೆ ಎಂಬಂತಾಗಿದೆ.

ವಿವಾಹ ಮತ್ತು ಕುಟುಂಬ ಇವು ಸಮಾಜದ ಇರುವಿಕೆಗೆ ಮುಂದುವರಿಕೆಗೆ ಒಟ್ಟು ಸ್ತ್ರೀ ಪುರುಷರ ಜೀವನದಲ್ಲಿ ಮುಖ್ಯವಾಗಿದ್ದು, ಅಲ್ಲಿ ಅವರಿಬ್ಬರ ಪಾತ್ರವೂ ಸಮಾನವಾಗಿದೆ. ಹೀಗಿದ್ದರೂ ಹೆಣ್ಣಿನ ಪಾಲಿಗೆ ಇವು ನಿರ್ಣಯಾತ್ಮಕ ಕೇಂದ್ರಗಳಾಗಿವೆ. ಈ ಚೌಕಟ್ಟಿನೊಳಗೆ ಆಕೆ ತನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳಬೇಕೆಂಬುದು ಎಂದಿನಿಂದಲೂ ನಡೆದುಕೊಂಡು ಬಂದ ರೂಢಿಯಾಗಿದೆ. ವೈವಾಹಿಕ ಬದ್ಧತೆಗೆ ಮಹಿಳೆಗೆ ಮಿಗಿಲಾಗಿದ್ದು ಯಾವುದೇ ಕೌಟುಂಬಿಕ ಏರುಪೇರುಗಳಿಗೆ ಅವಳನ್ನೇ ಹೊಣೆಗಾರಳನ್ನಾಗಿ ಮಾಡುವುದು ನಮ್ಮ ಹಿಂದಿನ ಮತ್ತು ಈಗಿನ ಸಂಸ್ಕೃತಿಯಲ್ಲಿ ಎದ್ದು ಕಾಣುವ ವಿವಾಹ ಕೇಂದ್ರಿತ ಅಂಶವಾಗಿದೆ.

### ವಿವಾಹ ಸಂಸ್ಥೆಯ ಅನಿವಾರ್ಯತೆ

'ವಿವಾಹ'ವೆಂಬುದು ಅತಿ ಮುಖ್ಯವಾದ ಶರೀರ-ಸಂಸ್ಕಾರ(sacrament sanctifying the body)ವಾಗಿದ್ದು ಪ್ರತಿಯೊಬ್ಬ ಸ್ತ್ರೀ-ಪುರುಷನೂ ಒಂದು ನಿಶ್ಚಿತ ವಯಸ್ಸು ಮತ್ತು ಸಮಯದದಲ್ಲಿ ಇದರ

ಮೂಲಕ ಮುಂದೆ ಸಾಗಬೇಕು. 'ಜೀವನ ಚಕ್ರ'(lif-cyale)ದ ಬಹಳ ಮುಖ್ಯವಾದ ಕಾಲಘಟ್ಟವಿದು, ಸ್ತ್ರೀ-ಪುರುಷರ ನಡುವಿನ ಸಂಬಂಧವನ್ನು ನಿಯಮಿತಗೊಳಿಸುವ ಹಾಗೂ ನಿಯಂತ್ರಣಗೊಳಿಸುವ ಸಂಬಂಧವನ್ನು ನಿಯಮಿತಗೊಳಿಸುವ ಹಾಗೂ ನಿಯಂತ್ರಣಗೊಳಿಸುವ ಸಂಸ್ಥೆ ಎಂದು ಕರೆದಿದ್ದಾರೆ. "ತಾಯಂದಿರಾಗಲು ಸ್ತ್ರೀಯರನ್ನು ಮತ್ತು ತಂದೆಗಳಾಗಲು ಪುರುಷರನ್ನು ಸೃಷ್ಟಿಸಲಾಗಿದೆ. ಆದ್ದರಿಂದ ಪುರುಷನು ತನ್ನ ಪತ್ನಿಯೊಡಗೂಡಿ ಧರ್ಮವನ್ನು ಆಚರಣೆಗೆ ತರಬೇಕೆಂದು ವೇದಗಳು ಗೊತ್ತುಪಡಿಸಿವೆ. ಎಂಬುದಾಗಿಯೂ ಮನುಮಹರ್ಷಿ ಸ್ಪಷ್ಟಪಡಿಸಿದ್ದಾರೆ ಮಾತ್ರವಲ್ಲ; ಇಹಲೋಕ ಹಾಗೂ ಪರಲೋಕಗಳಲ್ಲಿ ಸುಖ-ಸಮಾಧಾನವನ್ನು ಪಡೆಯಲು ಸಂತಾನವನ್ನು ಹೊಂದಿರುವುದೇ ಮುಖ್ಯ ಸಾಧನವೆಂದು ನಾವು ನಂಬುತ್ತಾ ಬಂದಿದ್ದೇವೆ. "ಹೆಂಡತಿ ಮಕ್ಕಳನ್ನು ಪಡೆದಿರಲು ಪುರುಷನೇ ಪರಿಪೂರ್ಣವಾದ ಪುರುಷ" ಎಂಬ ಮಾತನ್ನು ಮನಸ್ಮೃತಿಯಲ್ಲಿ ನಾವು ಕಾಣಬಹುದು. ತನಗೆ ಸುಯೋಗ್ಯನಾದ ಪತಿ ಸಿಗಲಿಲ್ಲವೆಂಬ ಕಾರಣ ಅವಿವಾಹಿತೆಯಾಗಿಯೇ ಮೋಕ್ಷ ಸಂಪಾದಿಸಲು ಯತ್ನಿಸಿದ ಹೆಂಗಸೊಬ್ಬಳಿಗೆ(ಕಾಶೀರಾಜನ ಪುತ್ರಿ ಅಂಬೆ) ನಾರದ ಋಷಿಯ "ವಿವಾಹ ಸಂಸ್ಕಾರದ ಮೂಲಕ ಪರಿಶುದ್ಧಳಾದ ಹೊರತು ಮೋಕ್ಷವನ್ನು ಸಂಪಾದಿಸಲು ಅಸಾಧ್ಯ" ಎಂದು ತಿಳಿಸಿದರೆಂಬುದಾಗಿ ನಾವು ಮಹಾಭಾರತದ ಮೂಲಕ ಓದಿ ತಿಳಿಯುತ್ತೇವೆ. ರಜಸ್ವತಿಯಾದ ಬಳಿಕ ವಿವಾಹವಾಗದೆ ಕನ್ಯೆಯಾಗಿಯೇ ಮರಣ ಹೊಂದಿದರೆ ಸದ್ಗತಿ ದೊರೆಯದೆಂಬ ನಂಬಿಕೆ ಈಗಲೂ ಸಂಪ್ರದಾಯಸ್ಥ ಹಿಂದೂಗಳಲ್ಲಿದೆ. ವಿವಾಹಕ್ಕೆ ಪ್ರಾಪ್ತವಯಸ್ಕಳಾಗಿಯೂ ಅವಿವಾಹಿತೆಯಾಗಿಯೇ ಉಳಿಯುವವಳಿಂದ ಕುಲಕ್ಕೆ ಕಳಂಕ ತಟ್ಟುವುದೆಂದು ಇದರಿಂದ ನರಕ ತಪ್ಪದೆಂದು ನಂಬುವವರೂ ಇದ್ದಾರೆ. ಎಂದ ಮಾತ್ರಕ್ಕೆ ವಿವಾಹವು ಕೇವಲ ಸ್ತ್ರೀಯರಿಗೆ ಮಾತ್ರ ಅನಿವಾರ್ಯವೆಂದಲ್ಲ; ಪುರುಷರಿಗೂ ಅದು ಅಷ್ಟೇ ಅಗತ್ಯ. "ಪುರುಷನಿಲ್ಲದವಳ ಬಾಳುವೆ ನೀರೊಳಾಕ್ಷರವ ಬರೆದಂತೆ" ಎಂದು ನಾಣ್ನುಡಿಯು ಅರೆಸತ್ಯವೆನಿಸಿದರೆ "ಹೆಣ್ಣಿಲ್ಲದವನ ಸಂಸಾರ ಮಳಲೊಳಗೆ ಎಣ್ಣೆ ಹೊಯ್ದಂತೆ ಎಂಬ ಅದರ ಉತ್ತರ ಭಾಗವು ಈ ನಾಣ್ನುಡಿಯ ಉಳಿದರ್ಧ ಸತ್ಯವನ್ನು ಸಾರುವುದು. ಮದುವೆಗೆ ಹೆಣ್ಣು ಗಂಡಿನ ಸಮ್ಮತಿ ಅವಶ್ಯಕವಿಲ್ಲ. ಒಂದೊಮ್ಮೆ ಗಂಡಿನ ಒಪ್ಪಿಗೆಗೆ ಸ್ವಲ್ಪ ಬೆಲೆ ಇದ್ದರೂ ಹುಡುಗಿಯ ಒಪ್ಪಿಗೆ ಉಹು, ಅವಳಿಗೇನು ಗೊತ್ತು, ಹಿರಿಯರು ಹೇಳಿದ್ದನ್ನು ಅವಳು ಕೇಳಬೇಕು ಎಂಬ ಮನೋಭಾವ ಬಾಲ್ಯದಲ್ಲಿ ತಂದೆ, ವಿವಾಹದ ನಂತರ ಪತಿ, ಇಳಿವಯಸ್ಸಿನಲ್ಲಿ ಮಗನ ರಕ್ಷಣೆಗೆ ಸ್ತ್ರೀ ಒಳಗಾಗಬೇಕಾದ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಅವಳು ಪುರುಷನ ಆಸ್ತಿ ಅಲ್ಲದೇ ಇನ್ನೇನೂ ಅಲ್ಲ. ಅವಳ ಒಂದೇ ಕರ್ತವ್ಯವೆಂದರೆ ತನ್ನ ಪತಿಯ ವಂಶಾಭಿವೃದ್ಧಿಗಾಗಿ ಗಂಡು ಮಗನನ್ನು ಹೆತ್ತುಕೊಡುವುದು ಪತಿಸೇವೆಯೇ ಅವಳ ಜೀವನದ ಪರಮಧ್ಯೇಯ. ಪತಿ ಎಂತಹ ಲಂಪಟ, ಕ್ರೂರಿಯಾದರೂ, ಅವನ ಚರಣಕಮಲಗಳಲ್ಲೇ ಅವಳ ಸ್ಥಾನ. ಶೀಲವಂತಳಾಗಿ, ಪತಿಗೆ ನಿಷ್ಠಳಾಗಿ ಬಾಳಿ ಅವನಿಗೆ ಮುಂಚೆ ಮುತ್ತೈದೆಯಾಗಿ ಸಾವನ್ನಪ್ಪುವುದೇ ಅವಳ ಜೀವನದ ಹಿರಿಮೆ. ಸೀತೆ, ಸಾವಿತ್ರಿ, ಅರುಂಧತಿ, ಸುಮತಿ ಮುಂತಾದ

ಪತಿವ್ರತೆಯರೇ ಅವಳ ಆದರ್ಶ. ಒಂದೊಮ್ಮೆ ಪತಿ ಮೊದಲೇ ಸತ್ತರೆ ಅವನೊಂದಿಗೆ ಚಿತೆಯೇರಿ ಅವಳು ಸ್ವರ್ಗಪ್ರಾಪ್ತಿ ಮಾಡಿಕೊಳ್ಳಬೇಕು.

ಹಾಗಿಲ್ಲದಿದ್ದರೆ ಮಂಗಳ ಸೂಚಕವೆನಿಸಿಕೊಂಡಿರುವ ಚಿಹ್ನೆಗಳನ್ನೆಲ್ಲಾ ಕಳಚಿ, ಬಿಳಿಯುಡುಗೆ ತೊಟ್ಟು ಶುಭ ಕಾರ್ಯದಲ್ಲೂ ಸ್ಥಾನವಿಲ್ಲದೆ ವಿಧವೆಯ ಜೀವನ ಇತರ ಹಂಗಿನಲ್ಲಿ, ದಬ್ಬಾಳಿಕೆಯಡಿಯಲ್ಲಿ ಸಾಗಬೇಕು. ಪುತ್ರಹೀನ ವಿಧವೆಯರ ಅದರಲ್ಲೂ ಬಾಲವಿಧವೆಯರ ಜೀವನವಂತೂ ಅತಿಘೋರ. ಸ್ತ್ರೀ ಪುರುಷನ ಸೊತ್ತು ಎಂಬ ಪರಿಕಲ್ಪನೆಯುಳ್ಳ ಈ ಸಮಾಜದಲ್ಲಿ ಸ್ತ್ರೀಯ ಚಾರಿತ್ರ್ಯಕ್ಕೆ ಎಲ್ಲಿಲ್ಲದ ಮಹತ್ವ. ಲಂಪಟವಂತನಿಗೂ ಅವನ ಪತ್ನಿ ಸತೀ ಶಿರೋಮಣಿಯಾಗಿರಬೇಕು. ಸ್ತ್ರೀಯ ದೈಹಿಕ ಪಾವಿತ್ರ್ಯವೇ ಮುಖ್ಯವಾಗಿರಬೇಕಾದಾಗ ತಿಳಿದೋ ತಿಳಿಯದೋ ದಾರಿ ತಪ್ಪಿದ ಸ್ತ್ರೀಯರ ಬದುಕು ನರಕಸದೃಶ್ಯ. ನಾರಿತ್ವದ ಘನತೆಗೆ ಎಳ್ಳಷ್ಟೂ ಬೆಲೆಯಿಲ್ಲದೆಡೆ ಒಳ್ಳೆಯ ಗುಣಗಳಿದ್ದರೂ 'ಪತಿತೆ' ಎಂಬ ಹೆಣಪಟ್ಟು ಕಟ್ಟಿಕೊಂಡ ಸ್ತ್ರೀಯರದು ನಾಯಿಪಾಡು. ಆಕೆಯ ಸ್ಥಿತಿಗೆ ಕಾರಣನಾದ ಪುರುಷನಿಗೆ ಸಾಮಾಜಿಕ ಮಾನ್ಯತೆಯಿದ್ದರೆ ಆಕೆಗೆ ಸಿಗುವುದು ಬಹಿಷ್ಕಾರ. ೧೭-೧೮ನೇ ಶತಮಾನದ ನೀತಿ ಮೌಲ್ಯಗಳ ಬೇರುಗಳು ಇಂದಿಗೂ ನಾಗರಿಕವೆನಿಸಿಕೊಂಡ ಸಮಾಜದಲ್ಲೂ ಗಟ್ಟಿಯಾಗಿ ನೆಲೆಯೂರಿ ನಿಂತಿವೆ. ಆದ್ದರಿಂದಲೇ ಸ್ವಾತಂತ್ರ್ಯ ದೊರೆತ ೫೭ ವರ್ಷಗಳ ನಂತರವೂ ನಮ್ಮ ಹೆಣ್ಣು ಮಕ್ಕಳು ತಮ್ಮ ಮುತ್ತಜ್ಜಿ, ಅಜ್ಜಿ, ಅಮ್ಮ ನಡೆದುಬಂದ ಹಾದಿಯನ್ನು ಬಿಟ್ಟು ಹೊಸ ಹಾದಿಯಲ್ಲಿ ನಡೆಯುವ ಸಾಮರ್ಥ್ಯ ಗಳಿಸಿಕೊಂಡಿಲ್ಲ. 'ಮದುವೆಯೇ ಜೀವನದ ಸರ್ವಸ್ವ' ಎಂಬ ಆದರ್ಶ ವಿದ್ಯಾವಂತ ಸ್ತ್ರೀಯರನ್ನೂ ಬಿಟ್ಟಿಲ್ಲ.

## ಬಾಲ್ಯವಿವಾಹ ಮತ್ತು ಅದರ ಕಾರಣಗಳು

**೧. ಕೆಲವು ಸ್ಮೃತಿಕಾರರ ಬೆಂಬಲ :** ಧರ್ಮಸೂತ್ರಗಳ ಕಾಲಾವಧಿಯಲ್ಲಿಯೇ ಬಾಲ್ಯವಿವಾಹ ಪದ್ಧತಿಗೆ ಬೆಂಬಲ ದೊರಕಲು ಆರಂಭವಾದುದನ್ನು ಕೆಲವು ಧರ್ಮಸೂತ್ರಕಾರರ ಬರಹಗಳಿಂದಲೇ ಗುರುತಿಸಬಹುದು. ಉದಾ : ಮನು, ಭೌಧಾಯನ, ವಿಷ್ಣು ಮತ್ತು ವಸಿಷ್ಠ ಮುಂತಾದವರು ಕ್ರಿ.ಪೂ.೪೦೦ ರಿಂದ ಕ್ರಿ.ಶ.೧೦೦ ಋತುಮತಿಯರಾಗುವುದಕ್ಕಿಂತ ಮುಂಚೆ ಅಥವಾ ಋತುಮತಿಯರಾದ ಬಳಿಕ ಹೆಣ್ಣುಮಕ್ಕಳನ್ನು ವಿವಾಹ ಮಾಡಬಹುದೆಂದು ತಿಳಿಸಿರುತ್ತಾರೆ. ಯಮ ಮತ್ತು ಯಜ್ಞವಲ್ಕ್ಯ ಋಷಿಗಳು(ಕಾಲ ಸುಮಾರು ಕ್ರಿ.ಶ.೨೦೦ ರಿಂದ ೬೦೦) ಕನ್ಯೆಯರನ್ನು ೯-೧೦ ವರ್ಷಗಳೊಳಗೆ ವಿವಾಹ ಮಾಡಬೇಕೆಂದು ಆಗ್ರಹಿಸಿದ್ದಾರೆ. ಪರಾಶರ ಸ್ಮೃತಿಯ ಪ್ರಕಾರ ೮ ವರ್ಷದ ಬಾಲಕೆಯು 'ಗೌರೀ' ಎಂಬುದಾಗಿ ೯ ವರ್ಷದಾಕೆಯು 'ರೋಹಿಣಿ'ಯು ಎಂಬುದಾಗಿ ೧೦ ವರ್ಷದಾಕೆ 'ಕನ್ಯಾ' ಎಂಬುದಾಗಿ ಕರೆಯಲ್ಪಡುವುದಲ್ಲದೇ ಅದಕ್ಕೂ ಹೆಚ್ಚು ವಯಸ್ಸಿನ ಬಾಲಿಕೆಯನ್ನು 'ರಜಸ್ವತಿ' ಎಂದು ಕರೆಯಲಾಗುವುದು. ಅವಿವಾಹಿತಳಾದ ಸೋದರನು ನರಕಕ್ಕೆ ಹೋಗುವರೆಂದು ಎಚ್ಚರಿಸುವ ಪರಾಶರ ಸ್ಮೃತಿಯು ಬಾಲ್ಯ ವಿವಾಹವನ್ನು ಪ್ರತಿಪಾದಿಸುವುದು

ರಜಸ್ವತಿಯಾದ ಬಳಿಕ ಆಕೆಯನ್ನು ವಿವಾಹವಾಗುವಾತನನ್ನು 'ವೈಶಾಲಿ'ಯ (ಕೀಳು ಜಾತಿಯ ಕನ್ಯೆ) ಗಂಡನೆಂದು ಸಂಬೋಧಿಸಲಾಗುವುದೆಂದು ತಿಳಿಸುವ ಪರಾಶರ ಸ್ಮೃತಿಯು ಅಂತಹ ವಿವಾಹವು ಪಾಪಯುಕ್ತವಾದುದು ಮತ್ತು ಸಾಮಾಜಿಕ ಬಹಿಷ್ಕಾರಕ್ಕೆ ಅರ್ಹವಾದುದು ಎಂಬುದಾಗಿಯೂ ತಿಳಿಸುವುದು. ಕೆಲವು ಶಾಸ್ತ್ರಕಾರರು ಇಂತಹ ಅಗ್ರಹಗಳು ಬಾಲ್ಯವಿವಾಹಕ್ಕೆ ಪ್ರಚೋದನೆ ನೀಡಿದವು.

**೨. ಕನ್ಯಾತ್ವ ಹಾಗೂ ಸಂಸ್ಕಾರಗಳ ಆದರ್ಶಗಳು :** ನಿರ್ದಿಷ್ಟ ಕನ್ಯಾತ್ವ(virginotly)ವನ್ನು ವಿವಾಹ ಯೋಗ್ಯಳಾದ ಸ್ತ್ರೀಯರಲ್ಲಿರಬೇಕಾದ ಅಗತ್ಯದ ಗುಣಗಳೆಂದು ಪರಿಗಣಿಸಿದಂದಿನಿಂದ ಅದು ಹೆಣ್ಣು ಮಕ್ಕಳ ಗೌರವದ ಕುರುಹಾಗಿ ಪರಿವರ್ತಿತಗೊಂಡಿತು. ಆದ್ದರಿಂದ ಎಷ್ಟೋ ಮಂದಿ ತಂದೆ-ತಾಯಿಯರು ತಮ್ಮ ಹೆಣ್ಣು ಮಕ್ಕಳ ಕನ್ಯಾತ್ವದ ಪರಿಶುದ್ಧತೆಯನ್ನು ಎತ್ತಿ ತೋರುವ ದೃಷ್ಟಿಯಿಂದ ಅವರಿಗೆ ಋತುಮತಿಯರಾಗುವ ಮೊದಲೇ ವಿವಾಹ ಮಾಡತೊಡಗಿದರು. ವಿವಾಹವೆಂಬುದು ಮುಖ್ಯವಾದ ಸಂಸ್ಕಾರಗಳಲ್ಲೊಂದು. ಸ್ತ್ರೀಯರ ದೃಷ್ಟಿಯಿಂದಂತೂ ಇದು ಅವರು ಒಳಗಾಗುವ ಏಕೈಕ ಸಂಸ್ಕಾರ. ಇದು ಅವರಿಗೆ ಉಪನಯನ ಸಂಸ್ಕಾರದಷ್ಟೇ ಮುಖ್ಯವಾದುದು. ಆದ್ದರಿಂದ ಇದನ್ನು ಎಲ್ಲಾ ಸಂಭ್ರಮ ಹಾಗೂ ಸಡಗರದಿಂದ ಮತ್ತು ಅಷ್ಟೇ ಪರಿಶುದ್ಧ ಹಾಗೂ ಪವಿತ್ರ ಹಿನ್ನೆಲೆಯಲ್ಲಿ ಮಾಡುವ ದೃಷ್ಟಿಯಿಂದಲೂ ಬಾಲ್ಯವಿವಾಹಗಳು ಜನಪ್ರಿಯಗೊಂಡಿದ್ದಿರಬೇಕು ಎನ್ನಲಾಗಿದೆ.

**೩. ಅನುಲೋಮ ಹಾಗೂ ಒಳಬಾಂಧವ್ಯ ವಿವಾಹಗಳ ಆದರ್ಶಗಳು :** ಬಹಳಷ್ಟು ಸಮಯದವರೆಗೆ ಅನುಲೋಮ(ಮೇಲ್ಜಾತಿಯವನು ಕೆಳಜಾತಿಯವಳನ್ನು ವಿವಾಹವಾಗುವುದು) ಹಾಗೂ ಒಳಬಾಂಧವ್ಯ(ಸಮೂಹ ಅಥವಾ ಜಾತಿಯೊಳಗೆ ವಿವಾಹವಾಗುವುದು) ವಿವಾಹದ ಆದರ್ಶಗಳು ಸಾಕಷ್ಟು ಪ್ರಚಲಿತವಿದ್ದು, ಪ್ರಭಾವಿ ಯಾಗಿದ್ದು, ಇದರೊಂದಿಗೆ ಕನ್ಯಾಪಿತೃಗಳು ಹೆಣ್ಣುಮಗಳು ಹುಟ್ಟಿ ಸ್ವಲ್ಪ ಸಮಯವಾಗುವುದರೊಳಗೆ ಸುಯೋಗ್ಯವಾದ ವರನನ್ನು ಹುಡುಕಿ ಆತನಿಗೆ ಆಕೆಯನ್ನು ಕೊಟ್ಟು ವಿವಾಹ ಮಾಡುವುದಕ್ಕಾಗಿ ಸಿಗುವ ಅತ್ಯಂತ ಮುಂಚಿತವಾದ ಅವಕಾಶಕ್ಕಾಗಿ ಕಾಯುತ್ತಿದ್ದುದೂ ಕೂಡಾ ಬಾಲ್ಯವಿವಾಹಕ್ಕೆ ಕಾರಣವಿರಬಹುದು. ಏಕಪತ್ನಿ ವಿವಾಹದ ಅಪಖ್ಯಾತಿಗೆ ಒಳಗಾಗಬೇಕಾದಿತ್ತೆಂಬ ಭಯವಿದ್ದುದರಿಂದ ಕೂಡಾ ಬಾಲ್ಯವಿವಾಹವು ಸಾಮಾನ್ಯವಾಗತೊಡಗಿತು. (೧೯ನೇ ಶತಮಾನದಲ್ಲಿಯೇ ಶ್ರೀರಾಮಕೃಷ್ಣ ಪರಮಹಂಸರು ೬ ವರ್ಷದ ಕನ್ಯೆಯನ್ನು ಆ ಬಳಿಕ ಎಮ್ .ಜಿ.ರಾನಡೆಯವರು ೮ ವರ್ಷದವಳನ್ನು ಮತ್ತು ಡಿ.ಕೆ.ಕರ್ವೆ ಅವರು ೯ ವರ್ಷದವಳನ್ನು ವಿವಾಹವಾಗಿದ್ದರು ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು)

**೪. ಹೊಣೆಗಾರಿಕೆಯ ವರ್ಗಾವಣೆ :** ಹಿಂದೂ ಶಾಸ್ತ್ರಕಾರರ ಪ್ರಕಾರ ಸ್ತ್ರೀಯಾಗಿರುವವಳಿಗೆ ಆಕೆಯ ದೈಹಿಕ ಇತಿಮಿತಿಗಳಿಂದಾಗಿ ಮತ್ತು ಆಕೆಯ ಪಾತ್ರದ ಸ್ವರೂಪದಿಂದಾಗಿ ಜೀವನ ಪರ್ಯಂತ ರಕ್ಷಣೆಯ ಅವಶ್ಯಕತೆಯಿರುತ್ತದೆ. 'ನಃ ಸ್ತ್ರೀ ಸ್ವಾತಂತ್ರ್ಯಂ ಅರ್ಹತಿ' (ಸ್ತ್ರೀಯು ಸ್ವಾತಂತ್ರ್ಯಕ್ಕೆ ಯೋಗ್ಯಳಲ್ಲ) ಎಂದು

ಸ್ಮೃತಿಕಾರ ಮನು ಹೇಳಲು ಇದೆ ಕಾರಣವೆಂದು ಹೇಳಲಾಗಿದೆ. ಆದ್ದರಿಂದಲೇ, ವಿವಾಹಕ್ಕೆ ಮೊದಲು ತಂದೆಯ ರಕ್ಷಣೆಯಲ್ಲಿ, ವಿವಾಹದ ನಂತರ ಗಂಡನ ರಕ್ಷಣೆಯಲ್ಲಿ ಮತ್ತು ತನ್ನ ವೃದ್ಧಾಪ್ಯದಲ್ಲಿ ಮಗನ ರಕ್ಷಣೆಯಲ್ಲಿ ಸ್ತ್ರೀ ಯಾಗಿರುವವಳು ಇರಬೇಕೆಂದು ಸೂಚಿಸಲಾಗಿದೆ. ಬಾಲಿಕೆಯ ತಂದೆಯಾಗಿರುವವನು ತನ್ನ ಮಗಳನ್ನು ರಕ್ಷಿಸುವ ಹೊಣೆಗಾರಿಕೆಯನ್ನು ಆದಷ್ಟು ಬೇಗನೆ ಆಕೆಯ ಗಂಡನಿಗೆ ವರ್ಗಾಯಿಸುವ ತವಕದಲ್ಲಿರುವುದರಿಂದಲೂ ಬಾಲ್ಯವಿವಾಹವು ಆಚರಣೆಗೆ ಬಂದಿತು.

**೫. ಮುಸ್ಲಿಂ ಧಾಳಿಯ ಪ್ರಭಾವ :** ಮುಸ್ಲಿಂ ಆಕ್ರಮಣಕಾರರು, ಮುಖ್ಯವಾಗಿ ಮುಸ್ಲಿಂ ರಾಜರುಗಳು ಮತ್ತು ಸೈನಿಕರು ಸುಂದರಿಯರಾದ ಹಿಂದೂ ಹೆಣ್ಣು ಮಕ್ಕಳನ್ನು ಅಪಹರಣ ಮಾಡುತ್ತಿದ್ದುದರಿಂದ ಅವರ ಕಣ್ಣ್ ತಪ್ಪಿಸಲು ಮತ್ತು ಅವರ ಶೀಲ ಸಂರಕ್ಷಣೆಯ ದೃಷ್ಟಿಯಿಂದಲೂ ಕನ್ಯಾಪಿತೃಗಳುಕ ತಮ್ಮ ಹೆಣ್ಣು ಮಕ್ಕಳನ್ನು ಸಾಕಷ್ಟು ಮುಂಚಿತವಾಗಿಯೇ ವಿವಾಹ ಮಾಡತೊಡಗಿದರು ಎನ್ನಲಾಗಿದೆ. ಐತಿಹಾಸಿಕವಾದ ಸತ್ಯಾಂಶಗಳು ಇದನ್ನು ಖಚಿತಪಡಿಸಿವೆ.

**೬. ಜಾತಿ ಮತ್ತು ಕುಟುಂಬದ ಪ್ರೋತ್ಸಾಹ :** ಹಿಂದೂ ಸಮಾಜದ ಪ್ರಭಾವಸಂಸ್ಥೆಗಳಾದ ಜಾತಿ ಹಾಗೂ ಜಂಟಿ ಕುಟುಂಬಗಳು ಬಾಲ್ಯವಿಹಾಹಕ್ಕೆ ತಮ್ಮದೇ ಆದ ಪ್ರಚೋದನೆ ನೀಡಿವೆ. ಒಳಬಾಂಧವ್ಯ ವಿವಾಹವು ಜಾತಿ ಅತ್ಯಂತ ಮುಖ್ಯವಾದ ಲಕ್ಷಣ. ಒಳಬಾಂಧವ್ಯ ವಿವಾಹದ ಆದರ್ಶದಿಂದಾಗಿ ಪ್ರತಿಯೊಬ್ಬ ಕನ್ಯಾಪಿತೃವೂ ತನ್ನ ಜಾತಿಯೊಳಗೆ ತನ್ನ ಮಗಳ ಮದುವೆ ಮಾಡಬೇಕಾದ ಒತ್ತಡಕ್ಕೆ ಒಳಗಾಗಿ ಮಗಳು ದೊಡ್ಡವಳಾದ ಮೇಲೆ ಆಕೆಗೆ ಸೂಕ್ತವಾದ ವರಸಿಗದೆ ಹೋಗಬಹುದೆಂಬ ಭಯದಿಂದ ಎಳೆ ವಯಸ್ಸಿನಲ್ಲಿಯೇ ಆಕೆಯ ಮದುವೆ ಮಾಡುವುದು ಪದ್ಧತಿಯಾಯಿತು. ಅವಿಭಕ್ತ ಕುಟುಂಬವು ಇಂತಹ ಪದ್ಧತಿಗೆ ಸದಾ ಪ್ರೇರಕ ಹಾಗೂ ಪೂರಕವಾಗಿದೆ. ಹೊಸದಾಗಿ ಮದುವೆಯಾದ ಚಿಕ್ಕವಯಸ್ಸಿನ ಬಾಲಕ, ಬಾಲಕಿಯರನ್ನು ಅವಿಭಕ್ತ ಕುಟುಂಬದ ಹಿರಿಯರು ಲಾಲನೆ-ಪಾಲನೆ ಮಾಡಿ ಬೆಳೆಸುವುದು, ರಕ್ಷಣೆ-ಶಿಕ್ಷಣ ನೀಡಿ ಸಂಪೋಷಿಸುವುದೂ ಸಾಮಾನ್ಯವಾಗಿತ್ತು.

**೭. ಕೆಳಜಾತಿಗಳಿಂದ ಅನುಕರಣೆ :** ಆರಂಭದಲ್ಲಿ ಬಾಲ್ಯವಿವಾಹವು ಕೇವಲ ಬ್ರಾಹ್ಮಣ ಮತ್ತು ಕ್ಷತ್ರಿಯರಲ್ಲಿ ಮಾತ್ರ ಆಚರಣೆಯಲ್ಲಿತ್ತು. ಕಾಲಾನುಕ್ರಮೇಣ ಇತರ ಕೆಳಜಾತಿಗಳವರು ಇದನ್ನು ಅನುಕರಣೆ ಮಾಡತೊಡಗಿದರು. ಮಾತ್ರವಲ್ಲ, ಅವರಿಗಿಂತ ಒಂದು ಹೆಜ್ಜೆ ಮುಂದು ಹೋಗಿ ತೊಟ್ಟಿಲೊಳಗೆ ವಿವಾಹವನ್ನು ಮಾಡಿಸತೊಡಗಿದರು. ಇನ್ನು ಕೆಲವು ಸಂದರ್ಭಗಳಲ್ಲಿ ಮಕ್ಕಳು ಇನ್ನೂ ತಾಯಿಯ ಗರ್ಭದಲ್ಲಿರುವಾಗಲೇ ವಿವಾಹದ ಒಪ್ಪಂದ ಮಾಡಿಕೊಳ್ಳುತ್ತಿದ್ದರು. ಕೆಳಜಾತಿಗಳಲ್ಲಿ ವಿಧವೆಯರ ವಿವಾಹಕ್ಕೆ ಆಕ್ಷೇಪಗಳಿರಲಿಲ್ಲವಾದ್ದರಿಂದ ಈ ರೀತಿ ಬಾಲ್ಯವಿವಾಹವನ್ನು ಆಚರಿಸುವುದು ಅವರಿಗೆ ಕಷ್ಟವಾಗುತ್ತಿರಲೂ ಇಲ್ಲ.

**ಬಾಲ್ಯವಿವಾಹವು ಹಲವಾರು ಬಗೆಯ ದುಷ್ಪರಿಣಾಮಗಳಿಗೆ ಕಾರಣವಾಯಿತು**

೧. ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ವಿಧವಾ ವಿವಾಹ ಸಾಧ್ಯವಾಗಿದ್ದರಿಂದ ವಿಧವೆಯರ ಸಂಖ್ಯೆ ಹೆಚ್ಚಿ ಅವರು ಮಾನಸಿಕ ದೈಹಿಕ ಹಿಂಸೆಗೆ ಒಳಗಾಗುವಂತಾಯಿತು. ಅವರುಗಳು ಲೈಂಗಿಕ ಅಪರಾಧಗಳಿಗೆ ಬಲಿಯಾದುದೂ ಇದೆ.

೨. ಬಹಳ ಚಿಕ್ಕ ವಯಸ್ಸಿನಲ್ಲಿ ಮದುವೆಯಾಗುವುದರಿಂದ ಸ್ತ್ರೀಯರ ಪುರ್ನಜನನದ ಸಾಮರ್ಥ್ಯ ಹೆಚ್ಚಿ ಅವರು ಹೆಚ್ಚು ಮಕ್ಕಳನ್ನು ಪಡೆಯುವಂತಾಗಿ ಜನಸಂಖ್ಯೆಯ ಗಾತ್ರ ಏರತೊಡಗಿತು.

೩. ಆದಷ್ಟು ಬೇಗನೆ ಮಗಳ ಮದುವೆ ಮಾಡಿಬಿಡಬೇಕೆಂಬ ಅವಸರದಲ್ಲಿ ಕನ್ಯಾಪಿತೃಗಳು ವರನ ಕಡೆಯವರ ಮೇಲೆ ಒತ್ತಡ ಹೇರಿ. ಅವರನ್ನು ಒಲಿಸಿಕೊಳ್ಳಲು ಉಡುಗೊರೆ ಅಥವಾ ಗಣನೀಯ ಪ್ರಮಾಣದಲ್ಲಿ ಸಂಪತ್ತನ್ನು ನೀಡತೊಡಗಿದ್ದುದೇ ಮುಂದೆ ವರದಕ್ಷಿಣೆಯೆಂಬ ಸಾಮಾಜಿಕ ಪಿಡುಗಾಗಿ ಪರಿಣಮಿಸಿತು.

೪. ಅಪ್ರಾಪ್ತ ವಯಸ್ಸಿನಲ್ಲಿ ನಡೆಯುವ ವಿವಾಹದಿಂದಾಗಿ ಗಂಡಾಹೆಂಡತಿಯು ಬಹುಬೇಗನೆ ತಮ್ಮ ಲೈಂಗಿಕ ಜೀವನವನ್ನು ಆರಂಭಿಸುವುದರಿಂದ ಪೂರ್ಣವಾಗಿ ಅದಕ್ಕೆ ಪಕ್ವವಾಗದ ವಯಸ್ಸಿನಿಂದಾಗಿ ಇಬ್ಬರ ಮನಸ್ಸಿನ ಮೇಲೆ ಕೆಟ್ಟ ಪರಿಣಾಮಗಳಾಗಬಹುದು. ಹೆಣ್ಣು ಮಕ್ಕಳು ಬಹುಚಿಕ್ಕವಯಸ್ಸಿನಲ್ಲಿಯೇ ಮಕ್ಕಳನ್ನು ಪೋಷಿಸುವುದರಿಂದ ಈ ಜೈವಿಕ ಪ್ರಕ್ರಿಯೆಗೆ ಇನ್ನೂ ಪೂರ್ಣವಾಗಿ ಪಕ್ವವಾಗದ ಅವರ ದೇಹಸ್ಥಿತಿ ಹಾಳಾಗಿ ಅವರು ರೋಗಪೀಡಿತರಾಗಬಹುದು. ಇಂತಹ ಅಪಕ್ವ ದೇಹಸ್ಥಿತಿಯಲ್ಲಿದ್ದಾಗಲೇ ಮಕ್ಕಳನ್ನು ಪೋಷಿಸುವುದಾದರೆ ಮಕ್ಕಳ ಆರೋಗ್ಯ ಕೂಡ ಹಾಳಾಗಬಹುದು.

೫. ವಿವಾಹವೆಂದರೇನೆಂಬುದನ್ನು ಅರಿಯುವುದರ ಮೊದಲೇ ಹುಡುಗ-ಹುಡುಗಿಯರಿಗೆ ವಿವಾಹವಾಗುವುದರಿಂದ ಅವರಿಗೆ ಆ ಸಂಬಂಧ ಒಗ್ಗದೇ ಇದ್ದರೂ ಅದಕ್ಕೆ ಅಂಟಿಕೊಳ್ಳಬೇಕಾಗುವುದು. ಇದರಿಂದ ಮಾನಸಿಕ ಸಮಸ್ಯೆಗಳು ಉದ್ಭವಿಸಿ ದಾಂಪತ್ಯ ಜೀವನ ದುಃಖಮಯವಾಗಬಹುದು.

**ವಿವಾಹದ ವಯಸ್ಸಿಗೆ ಸಂಬಂಧಿಸಿದ ಶಾಸನಗಳು**

ಬಾಲ್ಯವಿವಾಹ ಪದ್ಧತಿಯಿಂದ ಉಂಟಾಗುತ್ತಿದ್ದ ದುಷ್ಪರಿಣಾಮಗಳನ್ನು ಗಮನಿಸಿದ ಸಮಾಜ ಸುಧಾರಕರು ಅದರ ವಿರುದ್ಧ ದನಿಯೆತ್ತುತ್ತಲೇ ಇದ್ದರು. ೧೯ನೇ ಶತಮಾನದಲ್ಲಿ ಶ್ರೀ ರಾಜಾರಾಮ ಮೋಹನರಾಯರು ಹಾಗೂ ಪಂಡಿತ ಈಶ್ವರ ಚಂದ್ರ ವಿದ್ಯಾಸಾಗರರು ಈ ಪದ್ಧತಿಯ ವಿರುದ್ಧ ಹೋರಾಡಿದವರಲ್ಲಿ ಮುಖ್ಯರು. ಇವರುಗಳ ಮತ್ತು ಇತರ ಕೆಲವು ಸಮಾಜ ಸುಧಾರಕರ ಪ್ರಯತ್ನದಿಂದಾಗಿ ಆಗಿನ ಬ್ರಿಟಿಷ ಸರ್ಕಾರವು ಹಲವು ಶಾಸನಗಳನ್ನು ಮಾಡಿ ಈ ಪದ್ಧತಿಯನ್ನು ನಿಲ್ಲಿಸಲು ಯತ್ನಿಸಿತು.

೧. **೧೮೬೦ರ ಭಾರತೀಯ ಅಪರಾಧ ದಂಡಸಂಹಿತೆಯತೆ :** ೧೦ ವರ್ಷಕ್ಕೂ ಕಡಿಮೆ ವಯಸ್ಸಿನ ಕನ್ಯೆಗೆ ವಿವಾಹವನ್ನು ಗೊತ್ತುಪಡಿಸಿದಲ್ಲಿ ಅದನ್ನು 'ಅತ್ಯಾಚಾರ'ವೆಂದು ಪರಿಗಣಿಸುವುದಲ್ಲದೆ ಅದಕ್ಕೆ ಕಾರಣರಾದವರನ್ನು ದಂಡಿಸಲಾಗುವುದೆಂದು ವಿಧಿಸಲಾಯಿತು.

೨. **ಬಾಲ್ಯವಿವಾಹ ಪ್ರತಿಬಂಧಕ ಕಾಯ್ದೆ :** ೧೯೨೯ರಲ್ಲಿ ಹರ್ ಬೀರಾಸ್ ಶರದ್‌ರವರು(sharad Act) ಶರದ್ ಮಸೂದೆಯನ್ನು ರೂಪುಗೊಳಿಸಿದ್ದು ಆ ಬಳಿಕ ಅದು ಕಾಯ್ದೆಯಾಯಿತು. ಈ ಕಾಯ್ದೆಯ ಪ್ರಕಾರ ವಿವಾಹವಾಗುವ ಹುಡುಗನ ವಯಸ್ಸು ೧೮ ವರ್ಷ ಮತ್ತು ಹುಡುಗಿಯ ವಯಸ್ಸು ೧೪ ವರ್ಷಗಳಿಗಿಂತಲೂ ಕಡಿಮೆ ಇರಬಾರದೆಂದು ನಿಗಧಿಪಡಿಸಲಾಯಿತು. ಆದಾಗ್ಯೂ ಈ ಕಾಯ್ದೆಯಿಂದ ತಪ್ಪಿಸಿಕೊಂಡು ಅದೆಷ್ಟೋ ವಿವಾಹಗಳು ನಡೆಯುತ್ತಲೇ ಇದ್ದವು. ಸ್ವತಂತ್ರ ಭಾರತದಲ್ಲಿ ಮಾತ್ರ ಈ ನಿಟ್ಟಿನಲ್ಲಿ ಕೆಲವು ಮುಖ್ಯ ಕಾನೂನಿ ಕ್ರಮಗಳನ್ನು ಕೈಗೊಳ್ಳಲಾಯಿತು.

೩. **ಹಿಂದೂ ವಿವಾಹ ಕಾಯ್ದೆ :** ಈ ಕಾಯ್ಕೆಯಂತೆ ವಿವಾಹವಾಗುವ ವರನಿಗೆ ೧೮ ವರ್ಷ ಮತ್ತು ವಧುವಿಗೆ ೧೫ ವರ್ಷಗಳು ಪೂರ್ತಿಯಾಗಿರಬೇಕೆಂದು ನಿಯಮಿಸಲಾಗಿದೆ. ೧೯೭೮ರಲ್ಲಿ ಈ ಕಾಯ್ದೆಯನ್ನು ತಿದ್ದುಪಡಿ ಮಾಡಲಾಗಿದ್ದು, ಅದರಂತೆ ಈಗ ವಿವಾಹವಾಗುವ ಹುಡುಗನಿಗೆ ೨೧ ವರ್ಷಗಳು ಮತ್ತು ಹುಡುಗಿಗೆ ೧೮ ವರ್ಷಗಳು ಪೂರ್ಣಗೊಂಡಿರಬೇಕೆಂದು ವಿಧಿಸಲಾಗಿದೆ. ವಿವಾಹದ ವಯಸ್ಸಿಗೆ ಸಂಬಂಧಿಸಿದಂತೆ ತಿದ್ದುಪಡಿಗೊಂಡ ಈ ಶಾಸನವೇ ಅತ್ಯಂತ ಇತ್ತೀಚಿನ ಶಾಸನವಾಗಿದ್ದು ಈಗಲೂ ಆಚರಣೆಯಲ್ಲಿದೆ. ಇದನ್ನು ಇನ್ನೂ ಏರಿಸಿ ಹುಡುಗರಿಗೆ ೨೪ ವರ್ಷಗಳು ಹುಡುಗಿಯರಿಗೆ ೨೧ ವರ್ಷಗಳು ಪೂರ್ಣಗೊಂಡಿರಬೇಕೆಂದು ಪುನಃ ತಿದ್ದುಪಡಿ ಮಾಡಬೇಕೆನ್ನುವವರೂ ಇದ್ದಾರೆ.

## ವರದಕ್ಷಿಣೆ ಹಾಗೂ ಅದರ ದುಷ್ಪರಿಣಾಮಗಳು

**ವರದಕ್ಷಿಣೆ :** ವರದಕ್ಷಿಣೆ ಭಾರತೀಯ ಸಮಾಜಕ್ಕಂಟಿರುವ ಅನಿಷ್ಟ. ಇದೊಂದು ಭೀಕರ ಸಾಮಾಜಿಕ ಸಮಸ್ಯೆ. ವರದಕ್ಷಿಣೆ ಭಾರತೀಯ ನಾರಿಗೆ ಒಂದು ಶಾಪದಂತೆ ಕಾಡುತ್ತಿದೆ. ಇದೊಂದು ಸಾಮಾಜಿಕ ಸಮಸ್ಯೆಯಲ್ಲದೆ ಆರ್ಥಿಕ ಸಮಸ್ಯೆಯೂ ಆಗಿದೆ. ವರದಕ್ಷಿಣೆ ಸಮಸ್ಯೆಯಿಂದಾಗಿಯೇ ಹೆಣ್ಣು ಮಗು ಕುಟುಂಬಕ್ಕೊಂದು ಭಾರವಾಗಿದ್ದಾಳೆ. 'ಹೆಣ್ಣು ಹುಟ್ಟಿದರೆ ಹುಣ್ಣು ಎನ್ನುವಂತಾಗಲೂ ವರದಕ್ಷಿಣೆಯೇ ಕಾರಣ.' ವರದಕ್ಷಿಣೆಯಿಂದಾಗಿ ಇಂದು ಕುಟುಂಬಗಳಲ್ಲಿ ಸೌಖ್ಯ ಶಾಂತಿ ಹಾಳಾಗಿದೆ. ದಂಪತಿಗಳ ಮಧ್ಯೆ ಬಿರುಕುಂಟಾಗಲು ಇದು ಕಾರಣವಾಗಿದೆ. ಸಾಮಾಜಿಕ ಪಿಡುಗಾಗಿ ಬೆಳೆಯುತ್ತಿರುವ ವರದಕ್ಷಿಣೆ ಎಂಬ ರಾಕ್ಷಸನ ನಿರ್ಮೂಲನೆ ಮಾಡದಿದ್ದರೆ ನಮ್ಮ ಸಾಮಾಜಿಕ ನೆಮ್ಮದಿ ಹಾಳಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ವರದಕ್ಷಿಣೆ ಇಂದಿನ ಸಮಸ್ಯೆಯಲ್ಲ; ಬಹು ಪುರಾತನವಾದುದೂ ಅಲ್ಲ. ಸುಸಂಸ್ಕೃತ ಸಮಾಜದಲ್ಲಿ ಪ್ರೀತಿಯ ಸಂತಸದ ಪ್ರತೀಕವಾಗಿ ಹುಟ್ಟಿದ ವರದಕ್ಷಿಣೆ ಇಂದು ಕರಾಳ ರೂಪ ಧರಿಸಿದೆ.

ಹೆಣ್ಣು ಮಗಳನ್ನು ಲಗ್ನ ಮಾಡಿಕೊಡುವಾಗ ಹಿಂದೆ ಪಾಲಕರು ಮಗಳಿಗೆ ಬೇಕಾದ ಆಭರಣ ಹಾಗೂ ಸಾಧನ ಸಲಕರಣೆಗಳನ್ನು ತಮ್ಮ ಯೋಗ್ಯತೆಗೆ ತಕ್ಕಂತೆ ಕೊಡುತ್ತಿದ್ದರು. ಇವು ಪ್ರೀತಿಯ ಕಾಣಿಕೆಗಳಾಗಿರುತ್ತಿದ್ದವು. ಇಂದು ಅವೆಲ್ಲಾ ಕಾಣಿಕೆಯಾಗದೆ ವಿವಾಹಕ್ಕೆ ಮೊದಲು ನಡೆಯುವ ಮಾತುಕತೆಯಲ್ಲಿ ವರದಕ್ಷಿಣೆ ನಿಶ್ಚಿತಗೊಳಿಸಲಾಗುತ್ತಿದೆ; ಲಿಖಿತರೂಪ ಸಹ ನೀಡಿಲಾಗಿದೆ. ಆಭರಣ ಬಟ್ಟೆಗಳ ಜೊತೆ ಬಣ್ಣದ ಟಿ.ವ್ಹಿ.ಫ್ರೀಜ್ ಮೊದಲಾದವುಗಳು ಜೊತೆಗೆ ಹಣವೂ ವರದಕ್ಷಿಣೆ ಪಟ್ಟಿಯಲ್ಲಿ ಸೇರಿವೆ. ವರನ ಸಾಮಾಜಿಕ ಸ್ಥಾನಮಾನ ಹಾಗೂ ವೃತ್ತಿಯ ಆಧಾರದ ಮೇಲೆ ವರದಕ್ಷಿಣೆ ನಿಶ್ಚಿಯವಾಗುತ್ತದೆ. ಆಯ್.ಎ.ಎಸ್. ಆಯ್.ಪಿ.ಎಸ್ ಅಧಿಕಾರಿಯಾಗಿದ್ದರೆ ವರದಕ್ಷಿಣೆ ಹತ್ತಾರು ಲಕ್ಷಣಗಳಾಗಬಹುದು. ಡಾಕ್ಟರ್, ಎಂಜನಿಯರ್‌ಗಳಾದರೆ ಕೆಲವು ಲಕ್ಷಣಗಳಾಗಬಹುದು. ಲಂಚ ಹೆಚ್ಚಿಗೆ ಸಿಗುವ ನೌಕರಿಯಲ್ಲಿ ವರ ಇದ್ದರೆ ವರದಕ್ಷಿಣೆ ಇನ್ನೂ ಹೆಚ್ಚಾಗುತ್ತದೆ. ಒಂದು ರೀತಿಯಲ್ಲೇ ವರಗಳ ಮಾರಾಟ, ಪ್ರತಿಯೊಂದು ವೃತ್ತಿಗೊಂದು ಹಣೆಪಟ್ಟಿ ಇರುತ್ತದೆ.

ಶ್ರೀಮಂತ ಪಾಲಕರಿಗೆ ಹೆಣ್ಣು ವರದಕ್ಷಿಣಿ ಕೊಡುವುದು ಹೆಮ್ಮೆಯ ಸಂಕೇತವಾಗಿದ್ದರೆ ಅದು ಬಡ ಪಾಲಕರಿಗೆ ಪ್ರಾಣ ಸಂಕಟವಾಗಿರುತ್ತದೆ. ಮಧ್ಯಮ ಹಾಗೂ ಬಡವರ್ಗದವರಿಗೆ ವರದಕ್ಷಿನೆಯೊಂದು ಅಭಿಶಾಪವಾಗಿದೆ. ಬಡ ಹಾಗೂ ಮಧ್ಯಮ ವರ್ಗದ ಜನ ವರದಕ್ಷಿಣೆ ಬೇಡಿಕೆ ಪೂರೈಸಲು ತಮ್ಮಲ್ಲಿ ಸಂಪನ್ಮೂಲಗಳನ್ನು ಬಳಸಿಕೊಂಡು ಸಾಲ ಮಾಡಿ ಜೀವನ ಪರ್ಯಂತ ಅದನ್ನು ತೀರಿಸಲು ತೊಳಲಾಡುತ್ತಾರೆ. ಬದುಕಿನ ಉದ್ದಕ್ಕೂ ಅಪಮಾನ ಸಹಿಸಬೇಕಾಗುತ್ತದೆ. ವರದಕ್ಷಿಣೆಯ ಪಿಡುಗಿನಿಂದಾಗಿ ನಮ್ಮ ಕೌಟುಂಬಿಕ ಸುಖಶಾಂತಿ ಹಾಳಾಗಿದೆ. ವರನ ಮನೆಯವರ ಬೇಡಿಕೆಗಳನ್ನು ಪೂರೈಸದಿದ್ದರೆ ಬಾಲೆಯ ಬಾಳು ನರಕ ಸದೃಶ್ಯವಾಗಿ ಬಿಡುತ್ತದೆ. ಗಂಡನ ಮನೆಯವರ ಚುಚ್ಚು ಮಾತು ಕೇಳಬೇಕಾಗುತ್ತದೆ. ಅಪಮಾನಕ್ಕೊಳಗಾಗಬೇಕಾಗುತ್ತದೆ.

ತಂದೆ-ತಾಯಿ ಮನೆಯಿಂದ ಇನ್ನಷ್ಟು ತರಲು ಒತ್ತಾಯಿಸಿ ಗಂಡನ ಮನೆಯವರು ಸೊಸೆಗೆ ಒತ್ತಾಯಿಸುವುದು, ಹೊಡೆಯುವುದು ಬಡಿಯುವುದು, ಮನೆಯಿಂದ ಸುಳ್ಳು ನೆಪ ಹೇಳಿ ಹೊರಹಾಕುವುದು ಸಾಮಾನ್ಯವಾಗುತ್ತದೆ. ಆತ್ಮಗೌರವಿರುವ ಯಾವ ಮಹಿಳೆಯೂ ಇದನ್ನು ಸಹಿಸಲಾರಳು. ತನ್ನ ಹಾಗೂ ಪಾಲಕರ ಗೌರವ ರಕ್ಷಿಸಲು ಎಷ್ಟೋ ಸಲ ಮಹಿಳೆಯರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ವರದಕ್ಷಿಣೆ ನಮ್ಮ ಕುಟಂಬಗಳ ಶಾಂತಿ ಹದಗೆಡಿಸಿ ಮಧುರವಾದ ವಿವಾಹ ಬಂಧನವನ್ನು ವ್ಯವಹಾರಿಕ ಬಂಧನವನ್ನಾಗಿ ಮಾಡಿ ಅದರ ಘನತೆ ಗೌರವ ಅರ್ಥ ಹಾಳುಗೆಡವಿದೆ.

**ಕನ್ಯಾದಾನ-ದಕ್ಷಿಣೆ :** ನಮ್ಮ ಸಂಸ್ಕೃತಿಯಲ್ಲಿ ವಿವಿಧ ರೀತಿಯ ದಾನಗಳಿವೆ ಭೂದಾನ, ಗೋದಾನ, ವಿದ್ಯಾದಾನ, ಅದರಂತೆ ಕನ್ಯಾದಾನವೂ ಒಂದು ಎಂದು ಹೇಳಲಾಗುತ್ತದೆ. ದಾನ ನಮ್ಮ ಸಂಸ್ಕೃತಿಯ

ಪ್ರತೀಕ. ದಾನ ಯಾವಾಗಲೂ ಸತ್ಪಾತ್ರನಿಗೆ ನೀಡಬೇಕೆಂಬ ಕಡ್ಡಾಯವಿದೆ. ಹಾಗೆಯೇ ಕನ್ಯಾದಾನ ಮಾಡುವಾಗ ಒಳ್ಳೆಯ ವರನಿಗೆ ಕೊಡಬೇಕೆಂಬ ಭಾವ ಇದಲ್ಲಿ ವ್ಯಕ್ತವಾಗುತ್ತದೆ. ಯಾವುದೇ ದಾನ ಕೊಡುವಾಗ ಅದರೊಂದಿಗೆ ದಕ್ಷಿಣೆ ಕೊಟ್ಟಾಗಲೇ ಅದು ಪೂರ್ಣಕ್ರಿಯೆ ಆಗುತ್ತದೆ. ದಾನ ಸ್ವೀಕರಿಸಿದವ ದಾನ ಕೊಟ್ಟವರಿಗೆ ಉಪಕಾರ ಮಾಡಿದಂತೆ, ಉದ್ಧಾರ ಮಾಡಿದಂತೆ ಎಂಬ ವಿಶ್ವಾಸವೂ ಇದೆ. 'ಕನ್ಯಾದಾನ' ಮಾಡಿ ಮೇಲೆ ವರನಿಗೆ ನೀಡುವ ದಕ್ಷಿಣೆಯೇ ವರದಕ್ಷಿಣೆ. ದಕ್ಷಿಣೆಗೆ ಒಂದು ಸಾಂಕೇತಿಕ ಕೊಡುಗೆ. ಅದನ್ನು ಇಷ್ಟೇ ಕೊಡಬೇಕೆಂದು ಒತ್ತಾಯಿಸಲು ಬರುವುದಿಲ್ಲ. ದಾನ ಮಾಡುವವ ತನ್ನ ಶಕ್ತಿಗನುಸಾರವಾಗಿ ಕೊಡುತ್ತಾರೆ. ದಾನಸ್ವೀಕಾರದ ನಂತರ ಬರುವದಕ್ಷಿಣೆಯು ಆಕೆಗೆ ದಾನ ಸ್ವೀಕರಿಸುವುದು ಅಧರ್ಮ, ಅನೀತಿ. ಅದಕ್ಕಾಗಿಯೇ ವರದಕ್ಷಿಣೆ ಒಂದು ಹೀನ ಆಚರಣೆಯಾಗಿದೆ. ದಾನ ಮಾಡಲು ಸ್ತ್ರೀ ಏನು ಒಂದು ವಸ್ತುವೇ? ಪಶುವೇ? ಅದಕ್ಕಾಗಿ ಈ ಶಬ್ದಗಳು ಅರ್ಥವೇ ಬದಲಾಗಬೇಕಾಗಿದೆ. ವರದಕ್ಷಿಣೆ ಇತ್ತೀಚಿನ ದಿನಗಳಲ್ಲಿ ಹೆಚ್ಚಾಗಲು ಕಾರಣಗಳನ್ನು ವಿಶ್ಲೇಷಿಸಿದಾಗ ಬೆಳೆಯುತ್ತಿರುವ ಸ್ವಾರ್ಥವೆನ್ನಬಹುದು. ಸಿಕ್ಕಷ್ಟು ಸಿಗಲಿ, ಸಿಕ್ಕಿದ್ದೆಲ್ಲ ನನಗಿರಲಿ ಎಂಬ ನೀತಿಯಿಂದ ಮನುಷ್ಯ ಮೌಲ್ಯಗಳನ್ನು ಗಾಳಿಗೆ ತೂರಿ ಸಂಪತ್ತಿನ ದಾಸನಾಗುತ್ತಿರುವುದರಿಂದಲೇ ಹೆಂಡತಿಯಿಂದ ಸಹ ಸಂಪತ್ತು ಬರಲೆಂದು ಬಯಸುತ್ತಿದ್ದಾನೆ. ಅನ್ಯಾಯವಾದ ಮಾರ್ಗದಿಂದ ಹಣ ಮಾಡಿರುವ ಹಾಗೂ ಮಾಡುತ್ತಿರುವ ವರ್ಗ ತಮ್ಮ ನವ ಅರ್ಜಿತ ಧನದ ಅಸಹ್ಯ ಪ್ರದರ್ಶನ ಮಾಡಲು ಹೆಚ್ಚು ಹೆಚ್ಚು ವರದಕ್ಷಿಣೆ ನೀಡುತ್ತಿರುವುದರಿಂದ ವರದಕ್ಷಿಣೆ ಹೆಚ್ಚುತ್ತಿದೆ, ಹಾಗೂ ವ್ಯಾಪಾಕವಾಗುತ್ತಿದೆ.

ವರದಕ್ಷಿಣೆ ಹಿಂದುಳಿದ ವರ್ಗಗಳಲ್ಲಿ ಹಾಗೂ ಬಡವರಲ್ಲಿ ಇಲ್ಲ. ಇದು ಇರುವುದು ಮೇಲ್ವರ್ಗ ಹಾಗೂ ಶ್ರೀಮಂತರಲ್ಲಿ. ಇಲ್ಲಿ ಶ್ರೀಮಂತರಿಗೆ ಜಾತಿ ಭೇದವಿಲ್ಲ. ಎಲ್ಲ ಶ್ರೀಮಂತರು ವರದಕ್ಷಿಣೆ ಬೆನ್ನು ಹತ್ತಿದ್ದಾರೆ. ಧನಬಲವುಳ್ಳವರು ಬಡತನದಲ್ಲಿದ್ದು ಸಾಧನೆಯಿಂದ ಬಂದ ಬಡವರನ್ನು ಆಕರ್ಷಿಸುವುದು ಸುಲಭ. ಹೀಗಾಗಿ ಒಂದೇ ಜಾತಿಯಲ್ಲಿಯ ಬಡವರು ಹಾಗೂ ಶ್ರೀಮಂತರ ಮಧ್ಯೆ ಅಂತರದ ಕೊಳ್ಳ ವಿಸ್ತಾರವಾಗುತ್ತಿದೆ. ವರದಕ್ಷಿಣೆ ಪಿಡುಗಿನಿಂದ ಹೆಚ್ಚು ತೊಂದರೆಗೊಳಗಾದವರು ಹೆಣ್ಣು ಮಕ್ಕಳು ಆದರೂ ಅದೇ ಹೆಣ್ಣು ವರದಕ್ಷಿಣೆಗೆ ಕಾರಣಳಾಗಿದ್ದಾಳೆಂದರೆ ಯಾರೂ ಆಶ್ಚರ್ಯ ಪಡಬೇಕಾಗಿಲ್ಲ. ವರನ ತಾಯಿಯೇ ಹೆಚ್ಚಾಗಿ ವರದಕ್ಷಿಣೆ ವಿಷಯದಲ್ಲಿ ನಿರ್ಣಾಯಕ ಅಧಿಕಾರ ಹೊಂದಿರುತ್ತಾಳೆ. ಕಡಿಮೆ ತಂದ ಸೊಸೆಯ ಮಾನಸಿಕ ಹಿಂಸೆ ಮಾಡುವುದರಲ್ಲಿ ಅತ್ತೆಯ ಪಾತ್ರ ದೊಡ್ಡದಾಗಿರುತ್ತದೆ. ತಾನೂ ಸೊಸೆಯಾಗಿದ್ದ ಹಾಗೂ ತನಗೂ ಹೆಣ್ಣು ಮಕ್ಕಳಿವೆ ಎಂಬುದನ್ನು ಮರೆತು ನಡೆಯುವ ಮಹಿಳೆಯಿಂದಾಗಿ ವರದಕ್ಷಿಣೆ ಜಟಿಲಗೊಳ್ಳುತ್ತ ಸಾಗಿರುವುದು ವಿಚಿತ್ರವಾದರೂ ಸತ್ಯ.

ವರದಕ್ಷಿಣೆ ನಿಷೇಧ ಕಾನೂನು ೧೯೬೧ರಲ್ಲಿ ಜಾರಿಗೆ ತರಲಾಯಿತು. ಕಾನೂನು ರಚನೆಯಿಂದ ಈ ಸಮಸ್ಯೆಗೆ ಪರಿಹಾರ ದೊರೆಯದೆಂಬುದು ಈಗ ಎಲ್ಲರಿಗೂ ತಿಳಿದ ಸಂಗತಿ. ಹಲವಾರು ರಾಜ್ಯ ಸರಕಾರಗಳು ವರದಕ್ಷಿಣೆ ಪಿಡುಗು ನಿವಾರಿಸಲು ಸಾಕಷ್ಟು ಕಾನೂನು ಕ್ರಮಗಳನ್ನು ಕೈಗೊಂಡಿವೆ. ಸುಗ್ರೀವಾಜ್ಞೆಗಳನ್ನು ಹೊರಡಿಸಿದೆ. ವರದಕ್ಷಿಣೆ ಕೊಡುವುದು, ಪಡೆಯುವುದು ಈಗ ಕಾನೂನು ದೃಷ್ಟಿಯಲ್ಲಿ ಅಪರಾಧವಾಗಿದೆ. ವಿವಾಹ ಕಾಲದಲ್ಲಿ ಆಗುವ ಅನವಶ್ಯಕ ವೆಚ್ಚವನ್ನು ತಗ್ಗಿಸಲು ಸಹಕ್ರಮಕೈಗೊಳ್ಳಲಾಗಿದೆ. ಆದರೆ ಇವುಗಳನ್ನು ಮೀರಿ ವರದಕ್ಷಿಣೆ ಕೊಡುವುದ ತೆಗೆದುಕೊಳ್ಳುವುದು ನಡೆದಿದೆ.

ವರದಕ್ಷಿಣೆ ಒಂದು ಸಾಮಾಜಿಕ ಸಮಸ್ಯೆಯಾಗಿದೆ. ಕೇವಲ ಕಾನೂನು ರಚಿಸುವುದರಿಂದ ಈ ಸಮಸ್ಯೆಗೆ ಪರಿಹಾರ ದೊರೆಯಲಾರದು. ಇದಕ್ಕೆ ಜನ ಜಾಗೃತಿ ಅವಶ್ಯ. ಮಹಿಳಾ ಸಂಘಟನೆಗಳು ವರದಕ್ಷಿಣೆ ನಿರ್ಮೂಲನೆಗೆ ಅರ್ಪಿತವಾಗಬೇಕು. ವರದಕ್ಷಿಣೆ ಇರುವ ವಿವಾಹಗಳನ್ನು ಬಹಿಷ್ಕರಿಸಬೇಕು. ಸಾಮಾಜಿಕ ಬಹಿಷ್ಕಾರ ವಿಧಿಸಬೇಕು. ಧರ್ಮಾಧೀಶರು ವರದಕ್ಷಿಣೆ ಪಡೆಯುವವರ ವಿವಾಹಗಳಲ್ಲಿ ಪಾಲ್ಗೊಳ್ಳಬಾರದು ಹಾಗೂ ಅವರಿಗೆ ಯಾವುದೇ ಮಾನ್ಯತೆ ದೊರೆಯದಂತೆ ನಡೆದುಕೊಳ್ಳಬೇಕು.

ವರದಕ್ಷಿಣೆ ವಿರೋಧಿ ಜನಾಂದೋಲನವೇ ನಡೆಯಬೇಕು. ಎಲ್ಲ ಸಮೂಹ ಮಾಧ್ಯಮಗಳು ಈ ಕೆಲಸದಲ್ಲಿ ಪರಿಣಾಮಕಾರಿಯಾದ ಪಾತ್ರ ನಿರ್ವಹಿಸಬೇಕು. ವರದಕ್ಷಿಣೆ ತೆಗೆದುಕೊಳ್ಳುವುದು ಒಂದು ಕೀಳು ವರ್ತನೆ ಎನ್ನುವ ಭಾವನೆ ಬರುವವರೆಗೆ ಸಮೂಹ ಮಾಧ್ಯಮಗಳು ಜನಮನ ಪರಿವರ್ತನೆ ಕೆಲಸಕ್ಕೆ ಸಜ್ಜಾಗಬೇಕು. ವರದಕ್ಷಿಣೆ ವಿರುದ್ಧದ ಆಂದೋಲನ ಒಂದು ಜನಪರ ಆಂದೋಲನವಾಗಿ ರೂಪಿಸಿಕೊಳ್ಳಬೇಕು. ಹಳ್ಳಿ, ಪಟ್ಟಣಗಳ ಎಲ್ಲ ಸಾಮಾಜಿಕ ಸಂಸ್ಥೆಗಳು, ಸ್ವಯಂ ಸೇವಾ ಸಂಸ್ಥೆಗಳು ಈ ಅಂದೋಲನದಲ್ಲಿ ಪಾಲ್ಗೊಳ್ಳುವಂತಾಗಬೇಕು. ಸುಶಿಕ್ಷಿತ ತರುಣಿಯರು ಈ ಆಂದೋಲನದ ಮುಂಚೂಣಿಯಲ್ಲಿರಬೇಕು. ವರದಕ್ಷಿಣೆ ಪಡೆಯುವ ವರನ ಕೈಹಿಡಿಯುವುದಿಲ್ಲವೆಂದು ಅವರು ಘೋಷಿಸಿದರು. ಮಹಿಳೆಯನ್ನು ಪೂಜಿಸುವ ಸಂಸ್ಕೃತಿಯ ವಾರಸುದಾರರಾದ ನಾವು ವರದಕ್ಷಿಣೆ ಪಡೆಯುವುದು ಸ್ತ್ರೀಯತ್ವಕ್ಕೆ ಮಾಡುವ ಅಪಮಾನವಾಗಿದೆ. ಮಾತೃದೇವೋಭವ ಎಂದು ಹೇಳಿದ ನಾವು ವರದಕ್ಷಿಣೆ ಪಡೆಯುವುದು ನಮ್ಮ ಸಂಸ್ಕೃತಿಗೆ ಎಸಗುವ ಅಪಚಾರವಾಗಿದೆ. ಈ ತಿಳುವಳಿಕೆ ಎಲ್ಲರಲ್ಲಿ ಮೂಡುವಂತೆ ಜನ ಜಾಗೃತಿ ಮಾಡಬೇಕು.

**ವರದಕ್ಷಿಣೆ ಒಂದು ವಿಷವರ್ತುಲ :** ತಮ್ಮ ಮಗನಿಗೆ ವರದಕ್ಷಿಣೆ ಪಡೆದು ಮಗಳಿಗೆ ಕೊಡುವುದು. ಈ ವಿಷವೃತ್ತದಲ್ಲಿ ಸಿಕ್ಕ ಕುಟುಂಬಗಳ ಬದುಕು ದಾರುಣವಾಗುತ್ತದೆ. ಮಹಿಳಾ ಶಿಕ್ಷಣ ಹೆಚ್ಚಾದರೆ ವರದಕ್ಷಿಣೆಯನ್ನು ಪರಿಣಾಮಕಾರಿಯಾಗಿ ಎದುರಿಸಬಹುದಾಗಿದೆ. ಮಹಿಳೆಯರು ಆರ್ಥಿಕ ಸ್ವಾತಂತ್ರ್ಯ

ಪಡೆಯುವಂತಾದಾಗ ವರದಕ್ಷಿಣೆ ಸಮಸ್ಯೆ ಇಲ್ಲವಾಗಬಹುದು. ಆದರೆ ಅದಕ್ಕೆ ಮೊದಲೇ ವರದಕ್ಷಿಣೆ ವಿರುದ್ಧ ಜನಜಾಗೃತಿ ಉಂಟುಮಾಡುವುದು ಅತ್ಯಂತ ಅವಶ್ಯಕವಾಗಿದೆ.

**ಮುಖ್ಯಾಂಶಗಳು**

ವಿವಾಹದ ಸಂದರ್ಭದಲ್ಲಿ ಅಥವಾ ವಿವಾಹಕ್ಕೆ ಮುಂಚೆ ವಧುವಿನ ತಂದೆ-ತಾಯಿ ಅಥವಾ ಪೋಷಕರು ವರನಿಗೆ ಕೊಡುವ ಉಡುಗೊರೆ, ವರದಕ್ಷಿಣೆ ಇದು ಹಣ, ವಸ್ತ್ರ, ಭೋಗ ವಸ್ತುಗಳು, ವಾಹನಗಳು, ಉದ್ಯೋಗ ಕೊಡಿಸುವ ಆಶ್ವಾಸನೆ ಇತ್ಯಾದಿ ರೂಪಗಳಲ್ಲಿ ಇರುತ್ತವೆ. ಇವುಗಳ ಸ್ವರೂಪ ಮಿತಿ, ವರನ ವಧುವಿನ ಸಾಮಾಜಿಕ ಅಂತಸ್ತು, ಆರ್ಥಿಕ ಅಂತಸ್ತು, ವಿದ್ಯಾರ್ಹತೆ ಹಾಗೂ ಹೊಂದಿರುವ ಹುದ್ದೆಯನ್ನು ಅವಲಂಬಿಸಿದೆ. ಇದೊಂದು ಕೆಟ್ಟ ಸಾಮಾಜಿಕ ಸಂಪ್ರದಾಯ(ಪಿಡುಗು) ಎಂದು ಎಲ್ಲರೂ ತಿಳಿದಿರುವವರಾದರೂ ಇದರಿಂದ ಹೊರತಾಗಿರುವವರು ಬಹಳ ವಿರಳ. ಬಾಯಿ ಮಾತಿನಲ್ಲಿ ಎಲ್ಲರೂ ವಿರೋಧಿಸುವವರಾದರೂ ಕಾರ್ಯತಃ ವಿರೋಧಿಸುವವರು ಇನ್ನೂ ವಿರಳ.

**ವರದಕ್ಷಿಣೆ ಬೆಳೆದು ಬಂದ ಹಾದಿ :** ಪ್ರಾರಂಭದಲ್ಲಿ ಬಹುಶಃ ಹೊಸದಾಗಿ ವಿವಾಹವಾದ ವರನಿಗೆ ಜೀವನ ನಡೆಸಲು ಕಷ್ಟವಾಗಬಹುದೆಂದು ಅನುಕೂಲಸ್ಥ ವಧುವಿನ ಪೋಷಕರು ವರನಿಗೆ ಸ್ವಪ್ರೇರಣೆಯಿಂದ ನೀಡಿದ ಸಹಾಯ ವರ್ಷಾನುಗಟ್ಟಲೇ ಸಾಮಾಜಿಕ ಬದಲಾವಣೆ ನಾಗರೀಕತೆಯಲ್ಲಿನ ಬದಲಾವಣೆಯಿಂದಾಗಿ ಮನುಷ್ಯನ ಸ್ವಾರ್ಥತೆಯಿಂದಾಗಿ ವರದಕ್ಷಿಣೆ ಇಂದು ಒಂದು ಅಲಿಖಿತ ಕಾನೂನಿನಂತೆ, ಇದಿಲ್ಲದೆ ವಿವಾಹವೇ ಸಾಧ್ಯವಿಲ್ಲವೆನ್ನುವ ಮಟ್ಟಿಗೆ ಕಡ್ಡಾಯವಾಗಿದೆ. ಭೀಕರ ರೂಪ ತಾಳಿದೆ. ಸಿರಿವಂತರಿಗೆ ಇದು ಅತ್ಯಂತ ಸರಳ ಹಾಗೂ ಸಂತೋಷದ ಸಂಗತಿಯಾದರೂ ಬಡವರ ಪಾಲಿಗಂತೂ ಯಮಪಾಶದಂತೆ ಭೀಕರವಾಗಿದೆ. ವರದಕ್ಷಿಣೆ ವಿವಿಧ ಪ್ರಕಾರಗಳು. ನಗದು ರೂಪದಿಂದ ಹಿಡಿದು ವಾಹನ, ಮನೆ, ನಿವೇಶನ, ಚಿನ್ನ, ಬೆಳ್ಳಿ, ವಸ್ತ್ರ, ಆಧುನಿಕ ವೈಜ್ಞಾನಿಕ ಭೋಗ ವಸ್ತುಗಳಾಗಿರಬಹುದು.

**ವರದಕ್ಷಿಣೆಯ ಪರಿಣಾಮಗಳು :** ಇಲ್ಲಿ ಪತ್ರಿಕೆ ಸುದ್ದಿ ಸಮಾಚಾರ ಸಮೂಹ ಮಾಧ್ಯಮಗಳಲ್ಲಿ ಪ್ರಕಟಣೆಗೊಳ್ಳುತ್ತಿರುವ ಹಿಂಸೆಯ ವಿವಿಧ ರೂಪಗಳನ್ನು ತಿಳಿಸಬಹುದು. ಬಡವರು ಒಂದು ಹೆಣ್ಣು ಮಗುವಿಗೆ ಮದುವೆ ಮಾಡಿದ ನಂತರ ಜೀವನದಲ್ಲಿ ಚೇತರಿಸಿಕೊಳ್ಳಲಾಗದೇ ಸಾಲಗಾರರಾಗಿ ತಮ್ಮ ಗಂಡು ಮಕ್ಕಳಿಗೆ ಬದುಕಲು ಏನೂ ಇಲ್ಲದ ಹಾಗೆ ಮಾಡುವುದು. ಹೆಣ್ಣು ಸಮಾಜಕ್ಕೆ ತಂದೆ ತಾಯಿಗಳಿಗೆ ಹೊರೆ ಎಂಬ ಭಾವನೆ ಬೇರೂರಿ ಹೆಣ್ಣುಮಕ್ಕಳು ವಿವಾಹಕ್ಕೆ ಮುಂಚೆ ವಿವಿಧ ರೂಪಗಳಲ್ಲಿ ಆತ್ಮಹತ್ಯೆ ಮಾಡಿಕೊಳ್ಳುವುದು. ಇದರಿಂದಾಗಿ ಹೆಣ್ಣು ಭ್ರೂಣಗಳ ಹತ್ಯೆ, ಗಂಡುಹೆಣ್ಣಿನ ಮಧ್ಯೆ ಸಾಮರಸ್ಯ ಇಲ್ಲವಾಗುವುದು. ಉತ್ತಮ ಗಂಡನನ್ನು ಪಡೆಯಲು ಶ್ರೀಮಂತರ(ಮಧ್ಯೆ) ನಡುವೆ ಅನಾರೋಗ್ಯಕರ ಪೈಪೋಟಿ, ಗಂಡು ವರದಕ್ಷಿಣೆ ತೆಗೆದುಕೊಳ್ಳದಿದ್ದರೂ ಗಂಡಿನ ತಂದೆ-ತಾಯಿಗಳು ವರದಕ್ಷಿಣೆ ಕೊಡದೇ

ಬಂದ ಹೆಣ್ಣಿಗೆ ಕಿರುಕುಳವುದು, ಈ ಪಿಡುಗು ವಿದ್ಯಾವಂತರಲ್ಲಿಯೇ ಹೆಚ್ಚಾಗಿರುವುದು ಒಂದು ವಿಪರ್ಯಾಸ.

ವಿದ್ಯಾವಂತ ಯುವ ಜನಾಂಗದಲ್ಲಿ ಈ ಬಗ್ಗೆ ದೃಢ ನಿರ್ಧಾರ ಮೂಡಿಸುವುದು ಪೋಷಕರಿಗೆ ಸೂಕ್ತ ತಿಳುವಳಿಕೆ ಈ ಕಾರ್ಯವನ್ನು ಸಮೂಹ ಮಾಧ್ಯಮ ಸ್ವಯಂ ಸೇವಾ ಸಂಘರ್ಷಸಂಸ್ಥೆಗಳ ಪಾತ್ರ. ಸರ್ಕಾರದ ಪಾತ್ರ ಅತೀ ಹೆಚ್ಚಿನದು. ಇವುಗಳ ಮೂಲಕ ತಿಳುವಳಿಕೆ ಮೂಡಿಸಬೇಕು. ಕಾನೂನುಗಿಂತ ಸ್ವಯಂ ಪ್ರೇರಣೆಯಿಂದ ಯುವ ಜನಾಂಗದ ಮನಸ್ಸನ್ನು ಪರಿವರ್ತಿಸುವುದಾವಶ್ಯ. ಹೆಣ್ಣು ಮಕ್ಕಳು ಹಾಗೂ ಅವರ ತಂದೆ-ತಾಯಿಗಳು ವರದಕ್ಷಿಣೆ ಕೇಳುವವರನ್ನು ತಿರಸ್ಕರಿಸುವ ದೃಢ ನಿರ್ಧಾರ ಮಾಡುವಂತೆ ಸೂಕ್ತ ತಿಳುವಳಿಕೆ ನೀಡಬೇಕು.

ಎಲ್ಲಾ ಕ್ಷೇತ್ರಗಳಲ್ಲಿಯೂ ಹೆಣ್ಣು ಮಕ್ಕಳಿಗೆ ಸಮಾನಸ್ಥಾನ ಕಲ್ಪಿಸಿ ಹೆಣ್ಣು ಗಂಡಿಗಿಂತ ಯಾವುದೇ ವಿಧದಲ್ಲಿಯೂ ಕೀಳಲ್ಲ ಎಂಬ ಭಾವನೆಯನ್ನು ಬೆಳೆಸುವುದು ಹಾಗೂ ವರದಕ್ಷಿಣೆ ವಿರುದ್ಧ ಕಾನೂನು ಕ್ರಮಗಳ ಬಗ್ಗೆ ಯುವಜನರಲ್ಲಿ ತಿಳುವಳಿಕೆ ಮೂಡಿಸುವುದು ಇಂದಿನ ಅವಶ್ಯಕತೆಯಾಗಿದೆ.

## ವರದಕ್ಷಿಣೆಯ ವಿರುದ್ಧ ಸಮರ ನಡೆಸುವಲ್ಲಿ

ಉತ್ತರ ಭಾರತದ ಹಲವು ಮಹಿಳಾ ಸಂಘಟನೆಗಳು ಉದಾಹರಣೆಗೆ "ನಾರಿ ರಕ್ಷಾ ಸಮಿತಿ", "ಸ್ತ್ರೀ ಸಂಘರ್ಷ ಸಮಿತಿ", "ಮಹಿಳಾ ದಕ್ಷತಾ ಸಮಿತಿ" ಮುಂತಾದವುಗಳು ವರದಕ್ಷಿಣೆಯ ದುಷ್ಪರಿಣಾಮಗಳ ಬಗ್ಗೆ ಜನಾಭಿಪ್ರಾಯವನ್ನು ರೂಪಿಸುತ್ತಿವೆಯಲ್ಲದೆ ವರದಕ್ಷಿಣೆಯಿಂದ ಶೋಷಣೆಗೆ ಒಳಗಾದ ಕೆಲವು ಸ್ತ್ರೀಯರ ವೈಯಕ್ತಿಕ ಪ್ರಕರಣಗಳನ್ನು ಕೈಗೆತ್ತಿಕೊಂಡು ಹೋರಾಟ ನಡೆಸುತ್ತಿವೆ. ೧೯೭೮ರ ಜೂನ್ ೧೨ ರಂದು ದೆಹಲಿಯ ಸ್ತ್ರೀಯರು ದೊಡ್ಡ ಮೆರವಣಿಗೆಯೊಂದರಲ್ಲಿ ಹೋಗಿ ಕೇಂದ್ರದ ಗೃಹ ಸಚಿವರಿಗೆ ಮನವಿಯೊಂದನ್ನು ನೀಡಿ ವಿವಾಹ ಮತ್ತು ವರದಕ್ಷಿಣೆಗೆ ಸಂಬಂಧಿಸಿದ ಕಾನೂನುಗಳನ್ನು ಸೂಕ್ತವಾಗಿ ಸುಧಾರಣೆ ಮಾಡಬೇಕೆಂದು ಮತ್ತು ಎಲ್ಲಾ ವಿವಾಹಗಳನ್ನು ನೊಂದಾವಣೆ ಮಾಡಲು ಶಾಸನ ತರಬೇಕೆಂದೂ ಆಗ್ರಹಿಸಿದ್ದರು. (ಉತ್ತರ ಭಾರತದಲ್ಲಿಯೇ ದ.ಭಾರತಕ್ಕಿಂತಲೂ ಬಹುದೊಡ್ಡ ಪ್ರಮಾಣದಲ್ಲಿ ವರದಕ್ಷಿಣೆಯ ಹಿಂಸಾಚಾರಗಳು, ಅತ್ಯಾಚಾರಗಳು ನಡೆಯುತ್ತಿರುವುದರಿಂದ ಅಲ್ಲಿನ ಮಹಿಳಾ ಸಂಘಟನೆಗಳಿಗೆ ಅವುಗಳ ವಿರುದ್ಧ ಸೆಣೆಸುವುದು ಬಹುಮುಖ್ಯವಾದ ವಿಷಯವಾಗಿದೆ. ಉದಾ : ೧೯೮೨ರಲ್ಲಿ ದೆಹಲಿ ನಗರವೊಂದರಲ್ಲಿಯೇ ವರದಕ್ಷಿಣೆಗೆ ಸಂಬಂಧಿಸಿದಂತೆ ವಿವಾಹಿತ ಸ್ತ್ರೀಯರನ್ನು ಸುಟ್ಟ ೬೧೯ ಪ್ರಕರಣಗಳು ವರದಿಯಾಗಿದ್ದುವು.)

**ಬಹುಪತ್ನಿತ್ವ :** ಏಕಕಾಲದಲ್ಲಿ ಒಬ್ಬ ಪುರುಷರು ಒಬ್ಬಳು ಸ್ತ್ರೀಗಿಂತ ಹೆಚ್ಚು ಜನ ಸ್ತ್ರೀಯರನ್ನು ವಿವಾಹವಾಗುವ ಪದ್ಧತಿಗೆ ಬಹುಪತ್ನಿತ್ವ ಎನ್ನುತ್ತೇವೆ. ಬಹುಪತ್ನಿತ್ವವು ಉತ್ತರ ಅಮೇರಿಕಾದ ಕ್ರೋ(crow)

ಹಾಗೂ ಹಿಡಾಟ್ಸ(Hidatsa) ಜನರಲ್ಲಿ, ಆಫ್ರಿಕಾದ ನೀಗ್ರೋಗಳಲ್ಲಿ ಅಸ್ಥಿತ್ವದಲ್ಲಿದೆ. ರೀವರ್ಕ್ಸ್ ಎಂಬ ಸಮಾಜಶಾಸ್ತ್ರಜ್ಞನು "ಬಹುಪತ್ನಿತ್ವ ಹೆಚ್ಚಾಗಿ ಶ್ರೀಮಂತ ವಿಲಾಸೀ ಜನಲ್ಲಿಯೇ ಕಂಡುಬರುತ್ತದೆ" ಎಂದು ಅಭಿಪ್ರಾಯಪಟ್ಟಿದ್ದಾರೆ. ಈ ಪದ್ಧತಿ ರಾಜರು, ಸಂಸ್ಥಾನಿಕರು, ಶ್ರೀಮಂತ ಸರದಾರರು ಮೊದಲಾದವರಲ್ಲಿ ಹೆಚ್ಚು ಪ್ರಚಲಿತವಾಗಿದ್ದುದು ಕಂಡುಬರುತ್ತದೆ. ಆಫ್ರಿಕಾದ ಅರಸರಿಗೆ ನೂರಾರು ಜನ ಪತ್ನಿಯರಿರುತ್ತಿದ್ದರು. ಆಫ್ರಿಕಾದ ಒಂದು ಆದಿವಾಸಿ ಜನಾಂಗದ ನಾಯಕನಿಗೆ ೮೦೦ ಜನ ಪತ್ನಿಯರಿದ್ದಂತೆ! ಇತ್ತೀಚಿನ ಹೈದರಾಬಾದಿನ ನವಾಬರಿಗೆ ೩೦೦ ಜನ ಹೆಂಡತಿಯರಿದ್ದರು. ಬಹುಪತ್ನಿತ್ವ ಭಾರತದಲ್ಲಿ ಹಿಂದೂಗಳಲ್ಲಿ ಅತ್ಯಲ್ಪ ಪ್ರಮಾಣದಲ್ಲಿದ್ದರೂ ಮುಸಲ್ಮಾನರಲ್ಲಿ ವ್ಯಾಪಕವಾಗಿ ಆಚರಣೆಯಲ್ಲಿರುವುದು. ಮುಸಲ್ಮಾನರು ಧರ್ಮಸಮ್ಮತವಾಗಿ ಇಂದಿಗೂ ನಾಲ್ವರೂ ಪತ್ನಿಯರನ್ನು ವಿವಾಹವಾಗಬಹುದಾಗಿದೆ. ಅಂತೆಯೇ ಬಹುಪತ್ನಿತ್ವವು ಅನಾಗರಿಕರಲ್ಲಿಯೂ, ಪ್ರಾಚೀನ ಸಮಾಜಗಳಲ್ಲಿಯೂ ಪ್ರಚಲಿತವಿದ್ದು, ಸಧ್ಯದ ಆದಿವಾಸಿ ಜನಾಂಗಗಳಲ್ಲಿಯೂ, ಆಧುನಿಕ ಸಮಾಜಗಳಲ್ಲಿಯೂ ಅಲ್ಲಲ್ಲಿ ಅಸ್ಥಿತ್ವದಲ್ಲಿದೆ. ಬಹುಪತ್ನಿತ್ವಕ್ಕೆ ಅನೇಕ ಕಾರಣಗಳಿವೆ

೧. ಸ್ತ್ರೀಯರ ಸಂಖ್ಯಾ ಪ್ರಾಬಲ್ಯದಿಂದ

೨. ಪುರುಷರ ಪ್ರತಿಷ್ಠೆಯ ದ್ಯೋತಕವಾಗಿ

೩. ಹಣ ಸಂಪಾದನೆ ಮಾಡುವ ಸ್ತ್ರೀಯರ ಆರ್ಥಿಕ ಸಾಮರ್ಥ್ಯದಿಂದಾಗಿ

೪. ಮೊದಲ ಪತ್ನಿಯ ಬಂಜೆತನದಿಂದ

೫. ಹೆಚ್ಚು ಮಕ್ಕಳ ಬಯಕೆಯಿಂದ

೬. ಪುರುಷರ ವೈವಿಧ್ಯದ ಅಭಿಲಾಷೆ(Taste for variety)ಯಿಂದಾಗಿ

೭. ಪುರುಷತ್ವದ ದೃಢೀಕರಣಕ್ಕಾಗಿ,

೮. ಸ್ತ್ರೀಯರ ಅಲ್ಪಕಾಲಿಕ ಯೌವ್ವನಕ್ಕೆ ಪರಿಹಾರವಾಗಿ(Earlier ageing of women)

೯. ಪುರುಷರಲ್ಲಿ ಲೈಂಗಿಕಾಸಕ್ತಿ ಋತು ಮಾನಕ್ಕೆ ಮಾತ್ರ ಸೀಮಿತವಾಗಿರದೆ ಸದಾ ಜಾಗೃತವಿರುವುದರಿಂದ ಮತ್ತು

೧೦. ಪುರುಷರ ಅತಿಯಾದ ಕಾಮಾಸಕ್ತಿಯಿಂದ

೧೧. ಗಂಡು ಸಂತಾನದ ಬಯಕೆಯಿಂದ

೧೨. ಏಕಪತ್ನಿ ಮಾತ್ರ ಇದ್ದಲ್ಲಿ ಆಕೆಯೊಡನೆ 'ಬಲವಂತ ಬ್ರಹಚರ್ಯ(Enforceal celibacy)ದ

ನಿಯಮದಿಂದಾಗಿ (ಋತುಸ್ರಾವದ ಅವಧಿಯಲ್ಲಿ, ಗರ್ಭಿಣಿಯಾಗಿದ್ದಾಗ, ಮಗುವಿಗೆ ಹಾಲೂಡುವ ಅವಧಿಯಲ್ಲಿ ಪತ್ನಿಯೊಡನೆ ಲೈಂಗಿಕ ಕ್ರಿಯೆಯಲ್ಲಿ ತೊಡಗುವಂತಿಲ್ಲ) ವರ್ಷ ಪೂತಿರ ಲೈಂಗಿಕ ಸಂಪರ್ಕ ಇಟ್ಟುಕೊಳ್ಳಲಾಗದ್ದರಿಂದ

೧೩. ಯುದ್ಧ ಹಾಗೂ ಕಲಹಗಳಲ್ಲಿ ಸೆರೆಸಿಕ್ಕ ಸ್ತ್ರೀಯರನ್ನು ಉಪಪತ್ನಿಯರನ್ನಾಗಿ ಸ್ವೀಕರಿಸಬಹುದಾಗಿದ್ದ ಆಚರಣೆಯು ಇದುದ್ದರಿಂದ ಹೀಗೆ ಹಲವಾರು ಕಾರಣಗಳಿಂದ ಬಹುಪತ್ನಿತ್ವ ಆಚರಣೆಗೆ ಬಂದಿದೆ.

ಬಹುಪತ್ನಿತ್ವಕ್ಕೆ ಅನೇಕ ಕಾರಣಗಳಿವೆ. ನಿರ್ದಿಷ್ಟ ಸಮಾಜದಲ್ಲಿ ಸ್ತ್ರೀಯರ ಸಂಖ್ಯೆ ಪುರುಷರಿಗಿಂತ ಹೆಚ್ಚಿದ್ದರೆ ಬಹುಪತ್ನಿತ್ವ ಅನಿವಾರ್ಯವಾಗುತ್ತದೆ. ಸಂತಾನವಿಲ್ಲದ ಇಲ್ಲವೇ ಗಂಡುಸಂತಾನವಿಲ್ಲದ ಕಾರಣ ಪುರುಷನು ಮತ್ತೊಬ್ಬಳನ್ನು ವಿವಾಹವಾಗಬಹುದು. ಕೆಲವು ವೇಳೆ ವಿಲಾಸೀ ಸಿರಿವಂತರು ಸುಖ ಜೀವನ ನಡೆಸಲು ಅನೇಕ ಸ್ತ್ರೀಯರನ್ನು ವರಿಸಬಹುದು. ಹಲವು ಜನ ಪತ್ನಿಯರು ಅವರಿಗೆ ಜನಿಸುವ ಮಕ್ಕಳು ಒಂದಲ್ಲಾ ಒಂದು ಬಗೆಯ ಕಾರ್ಯದಲ್ಲಿ ತೊಡಗಿ ಸಂಪತ್ತು ವೃದ್ಧಿಸಲು ನೆರವಾಗುವರು ಎಂಬ ಹಿರಿದಾಸೆಯೂ ಇದಕ್ಕೆ ಪ್ರೇರಣೆಯಾಗಬಹುದು. ಕೆಲವು ಸಮಾಜಗಳಲ್ಲಿ ಬಹುಪತ್ನಿತ್ವದಿಂದ ವಿಶೇಷ ಮನ್ನಣೆ, ಗೌರವಗಳು ಪ್ರಾಪ್ತವಾಗುವ ಸಾಧ್ಯತೆಯಿದ್ದು, ತನ್ಮೂಲಕ ವ್ಯಕ್ತಿಗಳು ಹೆಚ್ಚಿನ ಸ್ಥಾನಮಾನಕ್ಕಾಗಿ ಹೆಚ್ಚು ಹೆಚ್ಚು ಸ್ತ್ರೀಯರನ್ನು ವರಿಸಲು ಸಾಧ್ಯತೆ ಇದೆ. ಸಾಮಾನ್ಯವಾಗಿ ಯುದ್ಧದಲ್ಲಿ ಸೆರೆಹಿಡಿಯಲ್ಪಟ್ಟ ಸ್ತ್ರೀಯರು ಗೆದ್ದ ಪುರುಷರ ವಶವಾಗಿ ಅವರ ಪತ್ನಿಯರಾಗುವರು.

ವೆಸ್ಟರ್ ಮಾರ್ಕ ತನ್ನ ''ಹಿಸ್ಟರಿ ಆಫ್ ಹ್ಯೂಮನ್ ಮ್ಯಾರೇಜ್ '' ಎಂಬ ಗ್ರಂಥದಲ್ಲಿ ಬಹುಪತ್ನಿತ್ವ ವಿವಾಹ ಪದ್ಧತಿ ಹಿಂದಿನ ಕಾಲದಲ್ಲಿ ಜನಪ್ರಿಯವಾಗಿದ್ದಕ್ಕೆ ಕೆಲವು ಪ್ರಮುಖ ಕಾರಣಗಳನ್ನು ನೀಡಿರುವನು. ಅವು ಈ ಮುಂದಿನಂತಿವೆ.

ಪುರಾತನ ಹಿಂದುಳಿದ ಆದಿವಾಸಿ ಸಮಾಜದಲ್ಲಿ ಸ್ತ್ರೀಯರು ಚಿಕ್ಕ ವಯಸ್ಸಿನಲ್ಲಿಯೇ ವೃದ್ಧೆಯರಾಗು ತ್ತಿದ್ದರು. ಪೌಷ್ಟಿಕ ಆಹಾರದ ಕೊರತೆ, ಆರೋಗ್ಯ ಸಂರಕ್ಷಣೆಯ ಅಭಾವ, ಬಿಡುವಿಲ್ಲದ ಬಾಣಂತಿತನ ಮೊದಲಾದವು ಸ್ತ್ರೀಯರಿಗೆ ಅರೇ ವಯಸ್ಸಿನಲ್ಲಿಯೇ ಮುಪ್ಪುಬರಿಸುತ್ತಿದ್ದವು. ಅದರಿಂದಾಗಿ ಪುರುಷರು ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನು ವರಿಸುತ್ತಿದ್ದರು. ಹಿಂದೆ ಆದಿವಾಸಿಗಳಲ್ಲಿ ಯುದ್ಧ ಹಾಗೂ ಕಲಹಗಳು ಸಾಮಾನ್ಯವಾಗಿದ್ದು ಹೆಚ್ಚು ಜನರಿದ್ದ ಬಣಗಳು ಗೆಲ್ಲುತ್ತಿದ್ದವು. ಆದಕಾರಣ ಬಣದ ಜನಸಂಖ್ಯೆಯು ಏರಿಕೆಯ ಉದ್ದೇಶದಿಂದಲೂ ಬಹುಪತ್ನಿತ್ವ ಅನುಸರಿಸಲ್ಪಡುತ್ತಿತ್ತು. ಅಲ್ಲದೆ ಆರೋಗ್ಯ ರಕ್ಷಣೆಯ ಅಭಾವವಿದ್ದ ಆ ಕಾಲದಲ್ಲಿ ಮಾತೆಯರು ಹಾಗು ಮಕ್ಕಳ ಮರಣದ ದರವೂ ಅಧಿಕವಿದ್ದು ಪುರುಷರು ಹಲವಾರು ಸ್ತ್ರೀಯರನ್ನು ವಿವಾಹವಾಗುತ್ತಿದ್ದರು. ಕಾಂಗೋ ಮೊದಲಾದ ಅನೇಕ ಅನಾಗರಿಕ ಆದಿವಾಸಿಗಳಲ್ಲಿ

ಮುಖಂಡರು ಹಾಗೂ ಸುಮಾರು ಸಿರಿವಂತರು ಹೆಚ್ಚು ಮಂದಿ ಸ್ತ್ರೀಯರನ್ನು ವರಿಸುವುದೆಂದರೆ ಹೆಚ್ಚು ಸಾಮಾಜಿಕ ಅಂತಸ್ತು ಹಾಗೂ ಗೌರವವನ್ನು ಪಡೆದಂತೆ ಎಂಬುದಾಗಿ ಭಾವಿಸುತ್ತಿದ್ದರು. ಅಂತೆಯೇ ಒಬ್ಬಳನ್ನು ವರಿಸುವುದು ಬಡತನದ ಲಕ್ಷಣವೆಂದೂ, ಹಲವು ಮಂದಿ ಸ್ತ್ರೀಯರನ್ನು ವಿವಾಹವಾಗುವುದು ಉತ್ತಮ ಸ್ಥಾನಕ್ಕೆ ಹಾದಿಮಾಡುವುದೆಂದು ಭಾವಿಸಿ ಹಾಗೆ ಮಾಡುತ್ತಿದ್ದರು. ಕೃಷಿಯನ್ನು ಪ್ರಧಾನ ಕಸುಬನ್ನಾಗಿ ಉಳ್ಳ ಪುರುಷರು ಹಲವಾರು ಪತ್ನಿಯರನ್ನು ಸ್ವೀಕರಿಸಿದರೆ ಆದಾಯ ಹೆಚ್ಚಾಗಲು ಸಂಭವವಿರುತ್ತದೆಂದು ಭಾವಿಸಿ ಆರ್ಥಿಕ ಕಾರಣದಿಂದಾಗಿ ಬಹುಪತ್ನಿತ್ವ ಆಚರಿಸುತ್ತಿದ್ದರು.

ಧರ್ಮವೂ ಸಹ ಬಹುಪತ್ನಿತ್ವಕ್ಕೆ ಪ್ರಚೋದನೆಯನ್ನಿಯುತ್ತದೆ. ಉದಾಹರಣೆ ಹಿಂದೂಗಳಲ್ಲಿ ಪ್ರತಿಯೊಬ್ಬ ವ್ಯಕ್ತಿಗೂ ಪುತ್ರ ಸಂತಾನವಾಗಲೇ ಬೇಕು, ಇಲ್ಲವಾದರೆ ಅವನಿಗೆ ಸದ್ಗತಿಯಿಲ್ಲ. ಒಬ್ಬ ಪತ್ನಿಯು ಬಂಜೆಯಾದರೆ ಗಂಡುಸಂತಾನ ಪಡೆಯದಿದ್ದರೆ ಅವನಿಗೆ ಮತ್ತೊಬ್ಬಳನ್ನು ವಿವಾಹವಾಗಿ ಪುತ್ರನನ್ನು ಪಡೆಯಬೇಕೆಂಬ ಆದೇಶ, ಬಹುಪತ್ನಿತ್ವಕ್ಕೆ ಕಾರಣವಾಗಿದೆ. ಮುಸಲ್ಮಾನರು ತಮ್ಮ ಧರ್ಮದ ಪ್ರಕಾರ ಏಕಕಾಲದಲ್ಲಿ ಒಬ್ಬ ಪುರುಷ ನಾಲ್ಕು ಜನ ಸ್ತ್ರೀಯರನ್ನು ವಿವಾಹ ಮಾಡಿಕೊಳ್ಳಬಹುದಾಗಿದೆ. ಕೆಲವು ಸಂಪ್ರದಾಯಗಳೂ ಸಹ ಬಹುಪತ್ನಿತ್ವಕ್ಕೆ ಪ್ರಚೋದನೆ ನೀಡುತ್ತವೆ. ಉದಾಹರಣೆಗೆ ಆಫ್ರಿಕಾದ ಕೆಲವು ಆದಿವಾಸಿಗಳಲ್ಲಿ ಸಂಪ್ರದಾಯದ ಪ್ರಕಾರ ಪತ್ನಿಯು ಮಗುವಿಗೆ ಜನ್ಮಕೊಟ್ಟ ನಂತರ ಎರಡು ವರ್ಷಗಳವರೆಗೆ ಪತಿಯ ಸಂಗವನ್ನು ತ್ಯಜಿಸಿ ಮಗುವಿನ ಪಾಲನೆ ಪೋಷಣೆಯ ಕಡೆಗೆ ಗಮನ ಕೊಡಬೇಕಾಗುತ್ತದೆ. ಇದರಿಂದಾಗಿ ಪುರುಷನು ಲೈಂಗಿಕ ಅಪೇಕ್ಷೆಯ ಪೂರೈಕೆಗಾಗಿ ಅನೇಕ ಪತ್ನಿಯರನ್ನು ಪಡೆದಿರುವ ಪರಿಪಾಠವಿರುತ್ತದೆ.

ಬಹುಪತ್ನಿತ್ವದಿಂದ ಕೆಲವಾರು ಅನುಕೂಲಗಳಿರುವಂತೆ ಕಂಡುಬಂದರೂ ಇದರಲ್ಲಿ ಅನುಕೂಲತೆಗಳೇ ಅಧಿಕವಾಗಿರುತ್ತವೆ. ಪತಿಯು ತನ್ನ ಪತ್ನಿಯರೆಲ್ಲರಿಗೂ ಸಮಾನ ರೀತಿಯ ಗಮನ ಕೊಡುವ ಸಾಧ್ಯತೆ ಅತೀವಿರಳ, ಇಲ್ಲವೆಂದರೂ ನಡೆದಿತು. "ಹಿರಿಯ ರಾಣಿಪಟ್ಟದ ರಾಣಿ" ಇತರರು ಉಪಪತ್ನಿಯರಂತೆ, "ಕಿವಿಕಿತ್ತರೂ ಕಿರಿ ಹೆಂಡತಿ ಪ್ರಾಣಿ ಇವೆ ಮೊದಲಾದ ಉಕ್ತಿಗಳು ಬಹುಪತ್ನಿತ್ವ ಸಂಸಾರದಲ್ಲಿನ ವಸ್ತುಸ್ಥಿತಿಯ ಬಗ್ಗೆ ಮಾತಾಡಿಮಾಡಿ ಕೊಡುತ್ತವೆ. "ಯಾವ ವ್ಯಕ್ತಿಯು ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನು ವಿವಾಹವಾಗುವನೋ ಅವನು ಕಷ್ಟ ಮತ್ತು ಅಶಾಂತಿಯನ್ನು ಅಪ್ಪಿದಂತೆ" ಎಂದು ಕಾಮಶಾಸ್ತ್ರಜ್ಞನಾದ ವಾತ್ಸಾಯನ ಅಭಿಪ್ರಾಯಪಟ್ಟಿದ್ದಾನೆ. ಬಹುಪತಿತ್ವದ ಸಂಸಾರದಲ್ಲಿ ಸವತಿಯರ ಮಕ್ಕಳೂ ಸಹ ಕಾದಾಡುವ ಸಂಭವ ಹೆಚ್ಚು. ತಂದೆಯಾದವರನು ಎಲ್ಲಾ ಪತ್ನಿಯರ ಮಕ್ಕಳಿಗೂ ಸಮರ್ಪಕವಾಗಿ ಗಮನ ಕೊಡುವುದಾಗಲೀ, ಅಗತ್ಯವಿದ್ಯೆ, ಬುದ್ಧಿ ಹಾಗೂ ನಡತೆಯನ್ನು ಕಲಿಸವುದಾಗಲೀ ಸಾಧ್ಯವಾಗುವುದಿಲ್ಲ.

ಕುಟುಂಬದಲ್ಲಿ ಜನಸಂಖ್ಯಾ ಬಾವುಳ್ಯದಿಂದಾಗಿ ಬಡತನ ಬಂದರೂ ಅಚ್ಚರಿಯಿಲ್ಲ. ಬಹುಪತ್ನಿತ್ವ ಎಂದೆಂದಿಗೂ ಆದರ್ಶಪ್ರಾಯವಾದ ವಿವಾಹ ಪದ್ಧತಿಯಾಗದು. ಇವೇ ಮೊದಲಾದ ಕಾರಣಗಳಿಂದಾಗಿ ಆಧುನಿಕ ಸಮಾಜವು ಬಹುಪತ್ನಿತ್ವವನ್ನು ಅನುಮೋದಿಸುವುದಿಲ್ಲ.

**ವಿವಾಹ ವಿಚ್ಛೇದನ :** ಕಾನೂನಿನ ಪ್ರಕಾರ ದಾಂಪತ್ಯ ಜೀವನವು ಕೊನೆಗೊಳ್ಳುವುದಕ್ಕೆ ವಿವಾಹ ವಿಚ್ಛೇದನ ಎನ್ನುತ್ತೇವೆ. ಸಾಂಪ್ರದಾಯಿಕ ಹಿಂದೂ ಸಮಾಜದಲ್ಲಿ ವಿವಾಹ ವಿಚ್ಛೇದನಕ್ಕೆ ಅವಕಾಶವಿರಲಿಲ್ಲ ವಿವಾಹವು ಪವಿತ್ರವಾದ ಧಾರ್ಮಿಕ ಸಂಸ್ಕಾರವಾಗಿದ್ದು ಅದು ಜನ್ಮ ಜನ್ಮಾಂತರಕ್ಕೂ ಬಿಡಿಸಲಾಗದ ಬಂಧನವೆಂಬ ನಂಬಿಕೆ ಪ್ರಬಲವಾಗಿತ್ತು, ವೈವಾಹಿಕ ಬಾಂಧವ್ಯವು ಜೀವನ ಪರ್ಯಾತ ತಿಳಿಯುವುದಲ್ಲದೆ, ಏಳೇಳು ಜನ್ಮಗಳಲ್ಲಿಯೂ ಮುಂದುವರಿಯುವುದಾಗಿ ಭಾವಿಸಲಾಗುತ್ತಿತ್ತು. ಪತಿಪತ್ನಿಯರು ಜೀವನ ನಶ್ವರವಾಗಿರುವುದನ್ನು, ಯೌವನವು ಕ್ಷಣಿಕವಾಗಿರುವುದನ್ನು ಅರಿತು ಇಂದ್ರಿಯ ಸುಖಭೋಗದಲ್ಲಿಯೇ ಮುಳುಗದೆ ನೈತಿಕತೆಗೆ ಹೆಚ್ಚಿನ ಮಹತ್ವ ನೀಡುವಂತೆ ಪ್ರಭಾವ ಬೀರಲಾಗುತ್ತಿತ್ತು. ಪತಿಪತ್ನಿಯರ ಆಸೆ-ಆಕಾಂಕ್ಷೆ, ಅಭಿರುಚಿ, ಅಭಿಪ್ರಾಯಗಳಲ್ಲಿ ವ್ಯತ್ಯಾಸಗಳು ಉಂಟಾದರೂ ಅವುಗಳನ್ನು ಪರಿಗಣಿಸದೇ ಹೊಂದಾಣಿಕೆಯ ಸಹಬಾಳ್ವೆ ಮಾಡುವುದು ಧರ್ಮವೆಂದು ಪ್ರಬಲವಾಗಿ ನಂಬಿದ್ದರು.

ವೇದಗಳ ಕಾಲದಲ್ಲಿ ವಿವಾಹ ವಿಚ್ಛೇದನಕ್ಕೆ ಸಂಬಂಧಪಟ್ಟ ವಿವರಣೆ ದೊರೆಯುವುದಿಲ್ಲ. ಮನು ಮೊದಲಾದ ಸ್ಮೃತಿಕಾರರೂ ವಿವಾಹವು ಎಂದೆಂದಿಗೂ ಮುರಿಯಲಾಗದ ಸಂಬಂಧವೆಂದೂ ವಿಧಿಸಿದಂತೆ ವಿವಾಹ ವಿಚ್ಛೇದನವನ್ನು ದುಸ್ಸಾಧ್ಯನ್ನಾಗಿ ಮಾಡಿದ್ದರು. ಕೌಟಿಲ್ಯನು ತನ್ನ ಅಮೂಲ್ಯ ಗ್ರಂಥ 'ಅರ್ಥಶಾಸ್ತ್ರ'ದಲ್ಲಿ ವಿವಾಹ ವಿಚ್ಛೇದನವನ್ನು ಕುರಿತು ಸುದೀರ್ಘವಾಗಿ ಪ್ರಸ್ತಾಪಿಸಿ ವಿವಾಹ ವಿಚ್ಛೇದನಕ್ಕೆ ಪ್ರಪ್ರಥಮವಾಗಿ ಅವಕಾಶ ನೀಡಿದ್ದಾನೆ. ಆತನ ಅಭಿಪ್ರಾಯದಂತೆ ಪತಿಯು ತಲೆಮರೆಸಿಕೊಂಡು ದೇಶಾಂತರ ಹೋಗಿದ್ದರೆ, ಸನ್ಯಾಸ ಸ್ವೀಕರಿಸಿದ್ದರೆ, ಜಾತಿ ಭ್ರಷ್ಟನಾಗಿದ್ದರೆ, ನಪುಂಸಕನಾಗಿದ್ದರೆ ಪತ್ನಿಯು ವಿವಾಹ ವಿಚ್ಛೇದನ ಪಡೆದು ಪುನರ್ವಿವಾಹ ಮಾಡಿಕೊಳ್ಳಬಹುದಾಗಿ ಆದೇಶಿಸಿದ್ದಾನೆ.

ನಮ್ಮ ಭಾರತದಲ್ಲಿ ಪ್ರಥಮವಾಗಿ ವಿವಾಹ ವಿಚ್ಛೇದನವನ್ನು ಜಾರಿಗೆ ತಂದ ಖ್ಯಾತಿ ಕೊಲ್ಲಾಪುರ ರಾಜ್ಯಕ್ಕೆ ಸಲ್ಲುತ್ತದೆ. ಅಲ್ಲಿ ೧೯೨೦ರಲ್ಲಿ ವಿವಾಹ ವಿಚ್ಛೇದನ ಕಾಯಿದೆಯನ್ನು ಜಾರಿಗೊಳಿಸಲಾಗಿದೆ. ಅನಂತರ ಬರೋಡ ರಾಜ್ಯವು ೧೯೪೨ರಲ್ಲಿ, ಮುಂಬಾಯಿ ಸರ್ಕಾರವು ೧೯೪೨ರಲ್ಲಿ ಮದ್ರಾಸು ೧೯೪೯ರಲ್ಲಿ ಸೌರಾಷ್ಟ್ರ ೧೯೫೨ರಲ್ಲಿ ವಿವಾಹ ವಿಚ್ಛೇದನ ಕಾಯ್ದೆಯನ್ನು ಜಾರಿಗೆ ತಂದಿದೆ. ಈಗ ಭಾರತ ಘುನಸರ್ಕಾರದ ೧೯೫೫ರ ವಿವಾಹ ವಿಚ್ಛೇದನಕ್ಕೆ ಸಂಬಂಧಪಟ್ಟ ಕಾಯಿದೆಯ ಪ್ರಕಾರ ವಾಸಿಯಾಗದ ಕಾಯಿಲೆ, ವ್ಯಭಿಚಾರ, ಮತಾಂತರ, ಹುಚ್ಚು, ನಪುಂಸಕತ್ವ, ಕ್ರೌರ್ಯ, ಸನ್ಯಾಸ ಸ್ವೀಕರಿಸಿರುವುದು, ಏಳು

ವರ್ಷಗಳಿಗಿಂತ ಹೆಚ್ಚಿನ ಅವಧಿ ನಾಪತ್ತೆಯಾಗಿರುವುದು ಇವೇ ಮೊದಲಾದ ಕಾರಣಗಳಿದ್ದಲೇ ವಿವಾಹ ವಿಚ್ಛೇದನವನ್ನು ಪಡೆಯಬಹುದಾಗಿದೆ.

೧. ಪ್ರತಿವಾದಿಯೂ ಸಂಗಾತಿಯನ್ನು ಎರಡು ವರ್ಷಗಳಿಂದಲೂ ನಿರಂತರವಾಗಿ ತ್ಯಜಿಸಿದ್ದರೆ.

೨. ಅರ್ಜಿದಾರರ ಮೇಲೆ ಕ್ರೌರ್ಯದಿಂದ ವರ್ತಿಸಿದ್ದರೆ.

೩. ಪ್ರತಿವಾದಿಯು ತನ್ನ ಜೀವನ ಸಂಗಾತಿಯನ್ನಲ್ಲದೆ ಬೇರೊಬ್ಬಳೊಡನೆ ಸಂಭೋಗ ನಡೆಸಿದ್ದರೆ

೪. ಸಾಂಕ್ರಾಮಿಕ ಗುಹ್ಯ ರೋಗಗಳಿಂದ ನರಳುತ್ತಿದ್ದರೆ

೫. ಅರ್ಜಿದಾರರು ಸಹಬಾಳ್ವೆ ನಡೆಸಲು ಸಾಧ್ಯವಾದ ಮಟ್ಟಿಗೆ ಮಾನಸಿಕ ವಿಕಲರು ಇಲ್ಲವೇ ಹುಚ್ಚರಾಗಿದ್ದರೆ

೬. ಸನ್ಯಾಸ ಸ್ವೀಕರಿಸಿದ್ದರೆ

೭. ಏಳು ವರ್ಷಗಳಿಂದಲೂ ಅಥವಾ ಅದಕ್ಕಿಂತಲೂ ದೀರ್ಘಕಾಲ ಪ್ರತಿವಾದಿಯು ಜೀವಂತವಾಗಿರುವುದರ ಬಗ್ಗೆ ಖಚಿತ ಸುಳಿವು ಸಿಕ್ಕದಿದ್ದರೆ.

ಪುರುಷನಾಗಲೀ, ಸ್ತ್ರೀಯಾಗಲೀ ಮನೆಯನ್ನು ಸ್ವರ್ಗಸಮಾನವಾಗಿ ಇಟ್ಟುಕೊಂಡಿರಲು ವಿವಾಹದ ದಿನ ದಿಂದಲೂ ಸತತವಾಗಿ ಶ್ರಮಿಸಬೇಕು. ದಂಪತಿಗಳು ದೃಢಕಾಯರಾಗಿರಬೇಕು. ಪರಸ್ಪರ ನಿಷ್ಠೆಯಿಂದಿರಬೇಕು. ಒಬ್ಬರನ್ನೊಬ್ಬರು ಅರ್ಥಮಾಡಿಕೊಳ್ಳಬೇಕು. ಕೂಡಿಬಾಳಲು ದೃಢಸಂಕಲ್ಪ ಮಾಡಬೇಕು. ಇವನು ಕಳಪೆ, ವಿಧಿಯಿಲ್ಲದೆ ವಿವಾಹವಾಗಿದೆ ಎಂದು ಮೊದಲಾದ ಕ್ಷುಲ್ಲಕ ಭಾವನೆಗಳನ್ನು ದೂರಮಾಡಬೇಕು, ಕೈಹಿಡಿಯುವುದು ಬೇಡ. ಕೈಹಿಡಿದ ಮೇಲೆ ಪರಸ್ಪರ ಅನ್ಯೂನ್ಯದಿಂದ ಕೂಡಿಬಾಳುವುದನ್ನು ಸಿದ್ಧಿಸಿಕೊಳ್ಳಬೇಕು. "ಕಾರ್ಯೇಷು ದಾಸೀ, ಕರಣೇಷು ಮಂತ್ರೀ, ಕ್ಷಮಯಾಧರಿತ್ರೀ, ಭೋಜ್ಯೇಷು ಮಾತಾ, ರೂಪೇಷು ಲಕ್ಷ್ಮೀ, ಶಯನೇಷು ರಂಭ" ಎಂಬ ನುಡಿ ಸ್ತ್ರೀಗೆ ಎಷ್ಟು ಸತ್ಯವೋ ಪುರುಷನಿಗೂ ಅಷ್ಟೇ ಸತ್ಯ. ಎಲ್ಲರೂ ಈ ಎಲ್ಲ ಗುಣಗಳನ್ನು ನೂರಕ್ಕೆ ನೂರರಷ್ಟು ಪಡೆಯಲು ಸಾಧ್ಯವಿಲ್ಲ. ಆದರೂ ಇರುವ ಇತಿಮಿತಿಯನ್ನರಿತು ವರ್ತಿಸಬೇಕು, ಸಾಮರಸ್ಯದಿಂದಿರಬೇಕು. ತಮ್ಮದು ಯೋಜಿತ ಕುಟುಂಬವಾಗಿರುವಂತೆ ಎಚ್ಚರಿಕೆ ವಹಿಸಿಬೇಕು. ಕ್ಷುಲ್ಲಕ ಕಾರಣಗಳಿಗಾಗಿಯೇ ರಂಪಾಟ ಮಾಡಿಕೊಳ್ಳಬಾರದು. ಕೂಡಿ ಬಾಳುವುದು ಸಾಧ್ಯವೇ ಇಲ್ಲ ಎನ್ನುವ ಘಟ್ಟ ತಲುಪಿದಾಗ ಮಾತ್ರ ವಿವಾಹ ವಿಚ್ಛೇದನವನ್ನು ಯೋಚಿಸಬೇಕು.

**ವೈಧವ್ಯ :** ಪ್ರಾಚೀನ ಕರ್ನಾಟಕದಲ್ಲಿ ಪತಿಯ ಮರಣಾಂತರ ಸತಿಯರು ಅಗ್ನಿ ಪ್ರವೇಶ ಕೈಗೊಳ್ಳುತ್ತಿದ್ದರೆ, ಕೆಲವರು ಧರ್ಮಾಸಾಕ್ತರಾಗಿ ಜೀವನವನ್ನು ಕಳೆಯುತ್ತಿದ್ದರು. ಅಗ್ನಿ ಪ್ರವೇಶ ಕಡ್ಡಾಯವಾಗಿರದಿದ್ದರೂ

ಸ್ವಸಂತೋಷದಿಂದ ಸ್ವೀಕರಿಸಿದ ಮಹಿಳೆಯರೇ ಹೆಚ್ಚು. ಇಂತಿಷ್ಟು ಗಂಡನಿರುವ ವಿವಾಹಿತ ಮಹಿಳೆಯರ ಪಾಡಾದರೆ, ಗಂಡನಿಲ್ಲದ ವಿಧವೆಯರ ಪಾಡು ಮತ್ತೂ ಚಿಂತಾಜನಕ. ವಿಧವೆಯರನ್ನು ಅಮಂಗಳೆಯರೆಂದು ಸಮಾಜ ಭಾವಿಸುತ್ತದೆ. ಸಾಮಾಜಿಕ ಸಂಸ್ಕೃತಿ ಬದುಕಿನಲ್ಲಿ ಸುಮಂಗಳೆಯರಿಗೆ ಎಲ್ಲಿಲ್ಲದ ಪ್ರಾಶಸ್ತ್ಯ. ಮಹಿಳೆಯರಿಗೆ ಅರಿಶಿನ, ಕುಂಕುಮ, ಹಸಿರುಬಳೆ ನೀಡಿ ಸ್ವಾಗತಿಸಿತು. 'ಸುಮಂಗಲಿಯರು ಶ್ರೇಷ್ಠ' ಎಂಬ ಅಪರೋಕ್ಷ ಸೂಚನೆಯನ್ನು ಸಮಾಜದ ಏನೆಲ್ಲಾ ಆಚರಣೆಗಳಲ್ಲಿ ಕಾಣುತ್ತೇವೆ. ಮುತ್ತೈದೆತನಕ್ಕೆ ಇಷ್ಟೆಲ್ಲ ಪ್ರಾಮುಖ್ಯ ಕೊಟ್ಟ ಮೇಲೆ ವೈಧವ್ಯವನ್ನು ಅಷ್ಟೇ ಹೀನಾಯವಾಗಿ ಕಾಣುತ್ತದೆ. 'ವೈಧವ್ಯ' ಮತ್ತು 'ಅವಲಂಬನೆ' ಜೊತೆಯಾದಾಗ ಮಹಿಳೆಯರ ಪಾಡು ತೀರಾ ಹೀನಾಯವಾಗುತ್ತದೆ. 'ವಿಧವೆಯರಿಗೆ ಯಾವುದೇ ಭೌತಿಕ ಹಾಗೂ ಆರ್ಥಿಕ ಸವಲತ್ತಿಲ್ಲ' ಎಂಬುದರ ಸಂಕೇತ ಈ ವಿಧವೆಯರು. ವಿಧುರರು ಮರುಮದುವೆಯಾಗುವಷ್ಟೇ ಸಹಜವಾಗಿ ವಿಧವೆಯರು ಮರುವಿವಾಹವಾಗುವುದಿಲ್ಲ. ಶೀಲ, ಪಾತಿವ್ರತ್ಯ, ಏಕಪತಿತ್ವಗಳನ್ನು ಹಾಡಿ ಹೊಗಳಿದ ಸಂಸ್ಕೃತಿಯ ಹಿನ್ನೆಲೆಯಲ್ಲಿ ಮರುಮದುವೆ ಕಾನೂನಿನ ರೀತಿ ಸಾಧ್ಯವಿದ್ದರೂ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಮಾನಸಿಕ ಅಡ್ಡಿ ಆತಂಕಗಳನ್ನು ಪೂರ್ಣ ಜಗಿಯಲಾಗಿಲ್ಲ.

ಭಾರತದ ಬಹುತೇಕ ಸಮುದಾಯಗಳಲ್ಲಿ ವಿಧವೆಯರು ಸಾಂಸ್ಕೃತಿ ಹೀನಾಯಕ್ಕೊಳಗಾಗಿದ್ದಾರೆ. 'ಉಚ್ಚ' ಜಾತಿಯ ಹಿಂದೂಗಳಲ್ಲಿ 'ವಿಧವೆಯರು ಅಮಂಗಳಕಾರಿಗಳು', ಪೂರ್ವ ಜನ್ಮದಲ್ಲಿ ಮಾಡಿದ ಪಾಪಗಳಿಗೆ ಇಲ್ಲಿ ಶಿಕ್ಷೆ ಅನುಭವಿಸುತ್ತಿರುವವರು, ಪತಿಹೀನರಾದ ಅಪೂರ್ವ ವ್ಯಕ್ತಿಗಳು ಎಂಬ ನಂಬಿಕೆ ತುಂಬ ಪ್ರಬಲವಾಗಿದೆ. ಸಣ್ಣ ವಯಸ್ಸಿಗೆ ವಿಧವೆಯರಾದರೂ 'ಕೇಶ ಮುಂಡನ, ಒಪ್ಪತ್ತಿನೂಟ ಮಾಡಿವ ಬದುಕು ಬಹಳಷ್ಟು ಮಹಿಳಯರಿಗೆ ಕಾದಿತ್ತು. ಮಾಸಲು ಕೆಂಪು ಬಣ್ಣದ ಸೀರೆ ಉಟ್ಟು, ಹಳೆಯ ಸೀರೆಗಳನ್ನು ಹಾದಿಹೊದ್ದು, ಇನ್ನೊಬ್ಬರಿಗಾಗಿ ರುಚಿ-ರುಚಿಯಾದ ಭೋಜನ-ಭಕ್ಷ್ಯ ತಯಾರಿಸಿ ತಾವು ಮಾತ್ರ ಒಪ್ಪತ್ತುಂಡು ಏಕವಸ್ತ್ರಧಾರಿಣಿಯಾಗಿ ಜಪಪೂಜೆ ಹತ್ತಿಬತ್ತಿ ಹೊಸೆಯುವುದರಲ್ಲಿ ಅವರು ಜೀವನ ಕಳೆದರು.

ವಿಧವೆಯರನ್ನು ಸಮಾಜ ಮತ್ತು ಕುಟುಂಬ ಒಂದು ಅಂಚಿಗೆ ಒತ್ತರಿಸುತ್ತಾ ಬಂದಿತು. ಬಂಗಾಳದಲ್ಲಿ ವಿಧವೆಯರನ್ನು ಮನೆಯಿಂದಲೂ ಹೊರಗಟ್ಟಿ ದೂರ ಮಾಡಿದ ವಾರಣಾಸಿ, ಮಥುರಾ, ವೃಂದಾವನಗಳಿಗೆ ರವಾನಿಸಿಬಿಡುತ್ತಿದ್ದರು. ಕುಟುಂಬಕ್ಕೆ ಗಂಡು ಉತ್ತರಾಧಿಕಾರಿಯನ್ನು ಕೊಡಲಾಗದಿದ್ದ ವಿಧವೆಯರಂತೂ ಕುಟಂಬಕ್ಕೆ ಹೊರೆಯೆಂದೇ ತೊರುತ್ತಿದ್ದರು. ಪುರುಷನ ಶೀಲಕ್ಕೆ ಕಟ್ಟುಪಾಡಿಲ್ಲದ ಸಮಾಜದಲ್ಲಿ ಸುಲಭವಾಗಿ ಲೈಂಗಿಕ ಬಲಿಪಶುಗಳಾಗುತ್ತಿದ್ದ ವಿಧವೆಯರನ್ನು ದೂರದ ಊರಿಗೆ ರವಾನಿಸಿ ಕೈತೊಳೆದುಕೊಂಡು ಬಿಡುವ ಸುಲಭದ ದಾರಿಯಾಗಿತ್ತು. ಇಂದಿಗೂ ಈ ಪ್ರದೇಶಗಳಲ್ಲಿ ವಿಧವೆಯರ ಅತಿ ದೀನ ಪಾಡನ್ನು ನೋಡುತ್ತೇವೆ. ಎರಡು ರೊಟ್ಟಿಯ ಊಟಕ್ಕೆ ಇಡೀ ದಿನ ಭಜನೆ ಮಾಡುವ ಒತ್ತಡ ಇವರ ಮೇಲೆ

ಇರುವುದು. ಮದುವೆಗೆ ಮೊದಲು ತಿಂದುಂಡು ಒಡವೆ, ವಸ್ತ್ರ, ಕುಂಕುಮ, ಬಳೆ, ಹೂವು ಎಲ್ಲವನ್ನು ಹಾಕಿಕೊಂಡಿರುತ್ತಿದ್ದ ಹುಡುಗಿ, ಗಂಡ ಸತ್ತೊಡನೆ ಎಲ್ಲವನ್ನು ತೊರೆಯಬೇಕಾಗುತ್ತದೆ. ಇಂಥ ಪಟ್ಟಣಗಳಲ್ಲಿ ಮಹಿಳೆಯರು ತೀರ ಕಟ್ಟುನಿಟ್ಟಾಗಿ ಇವೆಲ್ಲವನ್ನು ಆಚರಿಸದಿದ್ದರೂ, ಸಹ ಯಾವುದೇ ಶುಭ ಸಮಾರಂಭದಲ್ಲಿ ಭಾಗವಹಿಸಲು ಇಚ್ಛಿಸದೇ ಹಿಂಜರಿಯುತ್ತಾರೆ. ಶತಶತಮಾನಗಳು 'ಅಮಂಗಳೆಯರು' ಎಂದು ಕೊರೆದು ತುರುಕಿದ ಪ್ರತಿಗಾಮಿ ಚಿಂತನೆಗಳಿಂದ ಪೂರ್ಣಮುಕ್ತಿ ದೊರೆತಿಲ್ಲ. ೧೮೨೯ರಲ್ಲಿ ಜಾರಿಗೆ ಬಂದ ಸತಿಪದ್ಧತಿ ರದ್ಧತಿಯ ಕಾನೂನು, ೧೮೫೬ರಲ್ಲಿ ಜಾರಿಗೆ ಬಂದ 'ಪುನರ್ವಿವಾಹ ಕಾನೂನು'ಗಳು ವಿಧವೆಯರ ಪಾಡನ್ನು ಸ್ವಲ್ಪವಾದರೂ ಬದಲಾಯಿಸಿದವು. ಇದು ವಿಧವೆಯರು ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿದ್ದರೂ, ಅನೇಕ ರೀತಿ ನೀತಿಗಳು ಆಕೆಯನ್ನು ಸಾಂಸ್ಕೃತಿಕ ಆಚರಣೆಯಿಂದ ಹೊರಗಿಡುತ್ತವೆ.

**ಕೌಟುಂಬಿಕ ಹಿಂಸೆ :** ಕೌಟುಂಬಿಕ ಹಿಂಸೆ ಕೊನೆಯಿಲ್ಲದ ದುರಂತ ನಾಲ್ಕು ಗೋಡೆಗಳ ಮಧ್ಯೆ ನಡೆಯುವ ಹೆಣ್ಣಿನ ಆಕ್ರಂದನ, ಕಣ್ಣೀರು, ಹತಾಶೆ, ನಿಟ್ಟುಸಿರು, ಅಸಹಾಯಕತೆಗಳಲ್ಲಿ ನೊಂದು-ಬೆಂದು ಹೋಗುತ್ತಿರುವ ಮಹಿಳೆಯರ ಪಾಡು ನಿಜಕ್ಕೂ ಕರುಣಾಜನಕ. ನಿಜಾರ್ಥದಲ್ಲಿ ಪುರುಷ ವರ್ಗವನ್ನು ಹೊತ್ತು ಹೆತ್ತು ಬೆಳೆಯಿಸಿರುವ ಹೆಣ್ಣು, ತಾಯಿ ಗಂಡಿಗಿಂತಲೂ ಮೇಲು. ಆದರೆ ವಾಸ್ತವದಲ್ಲಿ ಹೆಣ್ಣು ಆದಿಯಿಂದಲ್ಲೂ ಗಂಡಿನ ಅಡಿಯಾಳು. ಅವಳನ್ನು ಬೇಕಾದ ಹಾಗೆ ಉಪಯೋಗಿಸಬಲ್ಲ ಜೀವಂತ ವಸ್ತು. ಗಂಡಿನ ದಾಹ, ದುರಾಸೆ, ವಂಚನೆ, ಅಮಾನುಷ ಪ್ರವೃತ್ತಿಗೆ ಅಸಹಾಯಕ ಹೆಣ್ಣು ಮಕ್ಕಳು ಈ ದೇಶದಲ್ಲಿ ನಿರಂತರವಾಗಿ ಬಲಿಯಾಗುತ್ತಿದ್ದಾರೆ. ಹೆಣ್ಣು ಸಂಸಾರದ ಕಣ್ಣು ಹೆಣ್ಣಿನಿಂದಲೇ ಇಹ, ಹೆಣ್ಣಿನಿಂದಲೇ ಪರ, ಹೆಣ್ಣಿನಿಂದಲೇ ಸಕಲ ಸಂಪತ್ತು ಎಂದು ಕೊಂಡಾಡುವವರು ಅವಳ ನಿಜವಾದ ಕೊಲೆಗಾರರಾಗಿರುವುದು ವಿಪರ್ಯಾಸ. ನಾಲ್ಕು ಗೋಡೆಗಳ ಮಧ್ಯೆ ತಾಯಿ, ಹೆಂಡತಿ, ಸಹೋದರಿಯರು ಹಾಗೂ ಪುತ್ರಿಯರ ಮೇಲೆ ಪುರುಷರು ವಿನಾಶಕಾರಣ ನಡೆಸುವ ನಾನಾ ಬಗೆಯ ದೌರ್ಜನ್ಯಗಳು ನಿಜಕ್ಕೂ ಭಯಾನಕ ಇದನ್ನು ತಡೆಯಲು ಕೇಂದ್ರ ಸರ್ಕಾರ ಹೊಸ ಕಾನೂನನ್ನು ತರಲು ಉದ್ದೇಶಿಸಿದೆ.

೧೯೯೦ ರಿಂದೀಚೆಗೆ ಮಹಿಳೆಯರ ಮೇಲೆ ಅವರ ಪತಿ ಇಲ್ಲವೇ ಸಂಬಂಧಿಕರು ನಡೆಸುವ ದೌರ್ಜನ್ಯದ ಪ್ರಮಾಣದಲ್ಲಿ ತೀವ್ರ ಹೆಚ್ಚಳ ಕಂಡುಬಂದಿದೆ. ೧೯೯೬ರಲ್ಲಿ ಮಹಿಳೆಯರ ಮೇಲೆ ನಡೆದ ಶೇಕಡಾ ೨೮.೬ರಷ್ಟು ಪ್ರಕರಣಗಳ ತಂಡ ಇಲ್ಲವೇ ಅವರ ಸಂಬಂಧಿಕರಿಂದಾಗಿ ಇದನ್ನು ತಡೆಯಲೆಂದೇ ಸರಕಾರ ಕೌಟುಂಬಿಕ ಹಿಂಸೆ ಕಾನೂನು ಜಾರಿಗೆ ತರಲು ಉದ್ದೇಶಿಸಿದೆ. ಆದರೆ ಕಾನೂನುಗಳು ಈವರೆಗೆ ಪರಿಪೂರ್ಣವಾಗಿ ಜಾರಿಯಾಗಿಲ್ಲವೆಂದೇ ಹೇಳಬಹುದು. ಪೊಲೀಸ್ ಮತ್ತು ನ್ಯಾಯಾಂಗ ಇಲಾಖೆ ನೆರೆಹೊರೆ ಒಟ್ಟಾರೆ ಜನ ಸಮುದಾಯ ಕಾಳಜಿಯಿಂದ ಸ್ಪಂದಿಸುವ ಅವಶ್ಯಕತೆಯಿದೆ.

ಈ ಅಲಿಖಿತ ಕಾನೂನು ಇಂದಿಗೂ ನಮ್ಮ ಸಮಾಜದಲ್ಲಿ ಜೀವಂತವಾಗಿರುವುದು ಸತ್ಯ. ಗಂಡಸರ ಯಜಮಾನ ಪೌರುಷ ಭಾವವೇ ಈ ಪರಾಕ್ರಮದ ಹೆಗ್ಗುರುತುಗಳೆಂಬುದು ಪುರುಷನ ಭಾವನೆ. ಇದೇ ಕೌಟುಂಬಿಕ ಹಿಂಸಾಚಾರದ ಮೂಲ. ಇದರ ಜೊತೆಗೆ ಆರ್ಥಿಕ, ಮಾನಸಿಕ ಕಾರಣಗಳು ಜೊತೆಯಾಗಿ ನೆಲೆಯಾಗಿದ್ದು, ಕುಟುಂಬದ ಹೆಂಗಸರ ಪಾಲಿಗೆ ನಿತ್ಯ ರಣರಂಗವಾಗುತ್ತದೆ. ಈ ರಣರಂಗದಲ್ಲಿ ಕೊನೆಗೆ ಸೋಲುಪ್ಪುವುದು ಹೆಣ್ಣೇ ಹೌದು. ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ಹೆಂಗಸರ ಸಾಲಿಗೆ ಪ್ರಮುಖ ಕಾರಣ ಕೌಟುಂಬಿಕ ಹಿಂಸಾಚಾರ ಇತರ ಯಾವುದೇ ರೋಗಗಳಿಗಿಂತಲೂ ಒಂದು ಸಮೀಕ್ಷೆಯ ಪ್ರಕಾರ ಬೆಂಗಳೂರಿನಲ್ಲಿ ಒಂದು ತಿಂಗಳಲ್ಲಿ ರಸ್ತೆ ಅಪಘಾತಗಳಲ್ಲಿ ಸಾಯುವ ಒಟ್ಟು ಜನರಲ್ಲಿ ಹೆಚ್ಚು ಸಂಖ್ಯೆಯಲ್ಲಿ ಹೆಂಗಸರು ಕೌಟುಂಬಿಕ ಹಿಂಸಾಚಾರದಿಂದ ಸಾಯುತ್ತಿದ್ದಾರೆ. ಒಂದು ಪವಿತ್ರ ಸಂಗತಿಯೆಂದರೆ ದೇಶದ ಯಾವುದೇ ಭಾಗದಲ್ಲಿ ರೋಗಗಳು ಮರುಕಳಿಸಿದಾಗ ಭೂಕಂಪನಗಳಾದಾಗ ಈ ಘಟನೆಗಳಲ್ಲಿ ಸತ್ತವರ ಸಂಖ್ಯೆ ರಾಷ್ಟ್ರೀಯ ಸ್ವರೂಪ ಪಡೆಯುತ್ತದೆ. ಆದರೆ ಕುಟುಂಬಿಕ ಹಿಂಸಾಚಾರದಿಂದ ಬೆಂಗಳೂರಿನಂತಹ ಒಂದೇ ನಗರದಲ್ಲಿ ಪ್ರತಿ ತಿಂಗಳು ನೂರಕ್ಕೂ ಹೆಚ್ಚು, ನತದೃಷ್ಟ ಮಹಿಳೆಯರು ಬಲಿಯಾಗುತ್ತಿದ್ದರೂ ಅವು ಪ್ರಚಾರ ಪಡೆಯುವುದೇ ಇಲ್ಲ. ಕಾರಣ ಹಿಂಸೆ ನಮ್ಮ ಪುರುಷ ಪ್ರಧಾನ ಸಮಾಜದ ದೃಷ್ಟಿಯಲ್ಲಿ ಹಿಂಸೆಯೇ ಅಲ್ಲ.

ಸಮಾಜದಲ್ಲಿ ಎಲ್ಲೆಡೆ ಎಲ್ಲರಿಂದ ನಡೆಯುವ ಹಿಂಸಾಚಾರ ದೌರ್ಜನ್ಯಗಳನ್ನು ಗುರಿತಿಸಿ ಶಿಕ್ಷೆ ಹಾಗೂ ಪರಿಹಾರಗಳಿಗೆ ಪ್ರಯತ್ನಗಳು ನಡೆಯುತ್ತವೆ. ಆದರೆ ನಾಲ್ಕು ಗೋಡೆಗಳ ಮಧ್ಯೆ ನಡೆಯುವ ಹಿಂಸೆ, ದೌರ್ಜನ್ಯ, ಶೋಷಣೆಗಳು ನಮ್ಮ ಸಮಾಜದ ಕಣ್ಣಿಗೆ ಬೀಳುವುದೇ ಇಲ್ಲ, ಬಿದ್ದರೂನೋಡಿಲ್ಲದಂತೆ ವರ್ತಿಸುತ್ತದೆ. ಯಾಕೆಂದರೆ ಇದು ಗಂಡ-ಹೆಂಡತಿಯ ಮಗ-ತಂದೆ, ಮಗಳು-ಸೊಸೆಯರ ಮಧ್ಯೆ ಘರ್ಷಣೆ ಅವರವರ ಸಂಸಾರದ ಗುಟ್ಟು ತಾಪತ್ರಯ. ಅದರ ಗೊಡವೇ ನಿಮಗೇಕೆ ಎನ್ನುತ್ತದೆ ಸಮಾಜ, ಸರ್ಕಾರ, ಪೊಲೀಸ್ ಇಲಾಖೆಗೂ ಇವೇ ಭಾವನೆ. ಹೀಗಾಗಿ ಗೃಹ ಹಿಂಸಾಚಾರಕ್ಕೆ ಕಾರಣಗಳು ನೂರೆಂಟು. ವರದಕ್ಷಿಣೆ ಪೀಡನೆ, ಕುಡುಕುತನ, ಶೀಲಶಂಕೆ, ಹಿಂಸಾಚಾರ ಪ್ರವೃತ್ತಿ, ಕೀಳರಿಮೆ ಇನ್ನೂ ಅನೇಕ ಕಾರಣಗಳು. ಗೃಹ ಹಿಂಸಾಚಾರದ ಕಾರಣಗಳಲ್ಲಿ ವರದಕ್ಷಿಣೆ ಪೀಡನೆಗೆ ಈಗ ಪ್ರಥಮ ಸ್ಥಾನವಿದೆ. ಹಣದ ದುರಾಸೆ ವಸ್ತುಗಳ ಮೇಲಿನ ವ್ಯಾಮೋಹದಿಂದ ಅತ್ತೆ, ಮಾವ, ನಾದಿನಿಯರು, ಮೈದುನ, ಗಂಡ ಮೊದಲಾದವರು ಮದುವೆಯಾಗಿ ಬಂದ ಹೆಣ್ಣಿನ ಬಾಳನ್ನು ಕಣ್ಣೀರಿನ ಕಥೆಯನ್ನಾಗಿಸುತ್ತಾರೆ. ಹಾಗೂ ವಸ್ತು ತರಲು ಒಪ್ಪದ ಅವಳನ್ನು ಹೊಡೆಯುತ್ತಾ, ಬಡಿಯುತ್ತಾ ಕೊನೆಗೆ ಸೀಮೆಎಣ್ಣೆ, ಪೆಟ್ರೋಲ್ ಸುರಿದು ಬೆಂಕಿ ಹಚ್ಚುತ್ತಾರೆ. ಜೀವಂತ ದಹಿಸುತ್ತಾರೆ. ಸಂಪತ್ತಿನ ದುರಾಸೆ ಕಾನೂನಿನ ನಿಷ್ಕ್ರಿಯಂತ ಪೊಲೀಸ್ ಇಲಾಖೆಯ ನಿರ್ಲಕ್ಷ್ಯ ಮುಂತಾದ ಕಾರಣಗಳಿಂದಾಗಿ ವರದಕ್ಷಿಣೆ ಸಾವುಗಳ ಸಂಖ್ಯೆ ಇತ್ತೀಚೆಗೆ

ಹೆಚ್ಚುತ್ತಲಿವೆ. ಗುಜರಾತಿನಲ್ಲಿ ಪ್ರತಿನಿತ್ಯ ೨೪ ಮಂದಿ ವಿವಾಹಿತ ಮಹಿಳೆಯರು ಸುಟ್ಟ ಗಾಯಗಳಿಂದ ಸಾಯುತ್ತಾರೆ.

೧೯೮೯-೧೯೯೧ರ ಅವಧಿಯಲ್ಲಿ ಗುಜರಾತಿನಲ್ಲಿ ೧೮,೦೦೦ ವಿವಾಹಿತ ಮಹಿಳೆಯರು ಅಗ್ನಿಗಾಹುತಿ ಯಾಗಿದ್ದಾರೆ. ಇದಕ್ಕೆ ನಮ್ಮ ದೇಶದ ಯಾವ ರಾಜ್ಯವು ಹೊರತಲ್ಲ. ಕುಡುಕತನಕ್ಕೆ ಕೌಟುಂಬಿಕ ಹಿಂಸಾಚಾರದಲ್ಲಿ ವರದಕ್ಷಿಣೆ ಪೀಡನೆಯಷ್ಟೇ ಮುಖ್ಯ ಪಾತ್ರವಿದೆ. ಕುಡುತನ ಹೆಂಡತಿ ಎಂದಿದ್ದರೂ ವಿಧವೆಯೇ ಎಂದು ಹೇಳುತ್ತಾರೆ, ಮಧ್ಯವ್ಯಸನದಿಂದ ಗಂಡ ಹೆಂಡತಿಯನ್ನು ನಿತ್ಯ ಹಿಂಸಿಸುತ್ತಾನೆ. ದುಡಿದಿದ್ದೆಲ್ಲವನ್ನು ಕುಡಿತಕ್ಕೆ ಹಾಕುತ್ತಾನೆ. ಹೀಗಾಗಿ ಹೆಂಡತಿ ಮಕ್ಕಳು ಬೀದಿಪಾಲಾಗಿರುತ್ತಾರೆ. ಕೀಳರಿಮೆ ಕೂಡಾ ಗೃಹ ಹಿಂಸಾಚಾರಕ್ಕೆ ತನ್ನ ಹೆಚ್ಚಿನ ಕಾಣಿಕೆ ಸಲ್ಲಿಸಿವೆ. ಸಂಪತ್ತು, ರೂಪ, ಬುದ್ಧಿವಂತಿಕೆ ಸಾಧನೆ ಲೈಂಗಿಕ ಶಕ್ತಿ ಯಾವುದರಲ್ಲಾದರೂ ಗಂಡ ಹೆಂಡತಿಯಲ್ಲಿ ಕೀಳರಿಮೆ ಇದ್ದರಾಯಿತು ಇದರ ಬಿಸಿ ಮೊದಲು ತಟ್ಟುವುದು ಹೆಂಡತಿಯನ್ನೇ.

ಕೌಟುಂಬಿಕ ಹಿಂಸಾಚಾರ ವಿಶ್ವವ್ಯಾಪ್ತಿಯಾದುದು. ಇದಕ್ಕೆ ಜನಾಂಗ, ವರ್ಗ, ಜಾತಿ, ವಯಸ್ಸು, ಶಿಕ್ಷಣ, ಅಂತಸ್ತುಗಳ ಲೆಕ್ಕವಿಲ್ಲ. ಅಮೇರಿಕಾದಂತಹ ಮುಂದುವರೆದ ದೇಶಗಳಲ್ಲೂ ಸಭ್ಯರು, ಸಿದ್ಧ ಪ್ರಸಿದ್ಧರೂ ಈ ವಿಚಾರದಲ್ಲಿ ಕಟಕಟೆಯಲ್ಲಿ ನಿಲ್ಲುತ್ತಾರೆ. ಅಲ್ಲಿನ ಒಂದು ಅಂದಾಜಿನ ಪ್ರಕಾರ ಅಮೇರಿಕಾದ್ಯಂತ ಪ್ರತಿವರ್ಷ ನಾಲ್ಕು ಮಿಲಿಯನ್ ಮಹಿಳೆಯರು ಕೌಟುಂಬಿಕ ಹಿಂಸಾಚಾರಕ್ಕೆ ಬಲಿಯಾಗುತ್ತಿದ್ದಾರೆ. ಬ್ರಿಟನ್ನಿನಲ್ಲಿ ಮಹಿಳೆಯರನ್ನು ಚಾಟಿಯಿಂದ ಹೊಡೆಯಲು ಪ್ರಾಚೀನ ಕಾನೂನುಗಳು ಅವಕಾಶ ಕಲ್ಪಿಸಿದ್ದವು. ಬಾಂಗ್ಲಾದೇಶದಲ್ಲಿ ತಮ್ಮ ಮಾತು ಕೇಳದ ಪತ್ನಿಯರ ಮುಖಕ್ಕೆ ಆ್ಯಸಿಡ್ ಎರಚಲಾಗುತ್ತದೆ. ಈ ರೀತಿಯ ಗೃಹ ಹಿಂಸಾಚಾರದ ಭಯಾನಕ ಸ್ವರೂಪವನ್ನು ಸ್ತ್ರೀವಾದಿ ಚಳುವಳಿ ಬಹಿರಂಗಪಡಿಸಿವೆ. ಮನೆಯೊಳಗೆ ಹೆಂಡತಿಯನ್ನು ಹಾಗೂ ಹೆಣ್ಣು ಮಕ್ಕಳನ್ನು ಹಿಂಸಿಸುವುದು ಮಾನವಹಕ್ಕು ಹಾಗೂ ನಾಗರಿಕ ಉಲ್ಲಂಘನೆ ಎಂದು ಪ್ರತಿಪಾದಿಸಿರುವ ಸ್ತ್ರೀವಾದಿ ಚಳುವಳಿಗಳು ಗೃಹ ಹಿಂಸೆ ತಡೆ ಕಾನೂನಿಗೆ ಒತ್ತಾಯಿಸಿದೆ. ಈ ಒತ್ತಾಯದ ಪ್ರತಿಫಲವಾಗಿ ಕೇಂದ್ರ ಸರ್ಕಾರ ಇವೆ. ಮುಂಗಡ ಪತ್ರ ಅಧಿವೇಶನದಲ್ಲಿ ಕೌಟುಂಬಿಕ ಹಿಂಸೆ ತಡೆ ವಿಧೇಯಕವನ್ನು ಮಂಡಿಸುವ ಆಶಯ ಹೊಂದಿದೆ.

ಕೌಟುಂಬಿಕ ಕ್ರೌರ್ಯ ಅನೇಕ ಹೆಣ್ಣುಮಕ್ಕಳ ಪ್ರಾಣಕ್ಕೂ ಸಂಚಕಾರವಾಗಿದೆ. ಹೆಣ್ಣಿನ ಜೀವ ಎಷ್ಟು ಅಗ್ಗವಾಗಿದೆ ಎಂದರೆ ಅದನ್ನು ತೆಗೆಯಲು ಒಂದು ರಾಗಿಮುದ್ದೆ ಕೂಡಾ ನೆನಪಾಗುತ್ತದೆ. ಗಂಡನ ಸಿಟ್ಟು, ಸೆಡವು, ಭುಗಿಲೆಳುವ ಕೋಪ ಇವುಗಳನ್ನು ನಮ್ಮ ಸಮಾಜ ಪೌರುಷದ ಕುರುಹಾಗಿ ಬೆಳೆಸಿ ಪೋಷಿಸುತ್ತದೆ. ಗಂಡುಮಕ್ಕಳಿಗೆ ಚಿಕ್ಕಂದಿನಿಂದಲು ತಮ್ಮ ವಿಪರೀತದ ಭಾವನೆಗಳನ್ನು, ಕೋಪವನ್ನು ಹದ್ದುಬಸ್ತಿನಲ್ಲಿಟ್ಟುಕೊಳ್ಳುವುದನ್ನು ಹೇಳಿ ಕೊಟ್ಟಿಲ್ಲ ಎಂದು ಅವಮಾನ ಮಾಡುತ್ತದೆ. ಹೆಣ್ಣಿಗೆ ಸಹನೆ

ಸಂಯಮವನ್ನು ಅಗಾಧವಾಗಿ ಬೋಧಿಸುವ ಸಮಾಜ ಗಂಡಿನ ಸಿಟ್ಟನಲ್ಲಿ ಅಪರೋಕ್ಷವಾಗಿ ಪ್ರೋತ್ಸಾಹಿಸುತ್ತದೆ.

**ಅಡಿಟಿಪ್ಪಣಿಗಳು**

೧. ಚ.ನ.ಶಂಕರರಾವ್, ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ವಿಘಟನೆ

೨. ಮಹಿಳೆಯರು, ಗಾಂಧೀ ಗ್ರಂಥಮಾಲೆ, ಪು.೪೫-೫೪

೩. ಚ.ನ.ಶಂಕರರಾವ್, ಪೂರ್ವೋಕ್ತ,

೪. ಡಾ.ಆರ್.ಇಂದಿರಾ, ಮಹಿಳೆ ಮತ್ತು ಕೌಟುಂಬಿಕ ಹಿಂಸೆ, ಶ್ರೀಮತಿ ಯಶೋಧಾರಾ ಟ್ರಸ್ಟ್, ಕಾಳಿದಾಸ ರಸ್ತೆ, ಮೈಸೂರು, ೨೦೦೦

೫. ಕೆ.ಭೈರಪ್ಪ, ನಗರ ಸಮಾಜ, ಪು.೬೨೯ ೬೩೧

೬. ಡಾ. ಚೆನ್ನಕ್ಕ ಎಲಿಗಾರ, ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ, ಪು.೪೪ ೪೮

೭. ಮಹೇಶ ತಿಪ್ಪಶೆಟ್ಟಿ, ಸಾಮಾಜಿಕ ಆಲೋಚನೆ, ದಾಳಿಂಬ ಪ್ರಕಾಶನ, ಹುನುಗುಂದ, ೧೯೯೫, ಪು.೯೪ ೧೦೧

೮. ಮಹಿಳಾ ಅಧ್ಯಯನ ವಿಶೇಷ ಸಂಚಿಕೆ, ೨೦೦೧, ಪು.೧೦ ೩೧

೯. ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೬

೧೦. ಡಾ.ಆರ್.ಇಂದಿರಾ, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪು.೬೮

೧೧. ಚ.ನ.ಶಂಕರರಾವ್, ಭಾರತೀಯ ಸಮಾಜ

೧೨. ಮಹಿಳಾ ಅಧ್ಯಯನ ವಿಶೇಷ ಸಂಚಿಕೆ, ೨೦೦೧, ಪು.೧೫೭ ೧೮೫

ಹೆಣ್ಣು ಶಿಶುವಿನ ಜನನವನ್ನೇ ಒಂದು ಶಾಪವೆಂದು ತಿಳಿದಿದ್ದ ಪೋಷಕರು, ಅವಳಿಗೆ ಜ್ಞಾನವನ್ನು ಒದಗಿಸಲು ಯಾವ ಆಸಕ್ತಿಯನ್ನು ತೋರಿರಲಿಲ್ಲ. ಸಣ್ಣ ವಯಸ್ಸಿನಲ್ಲೇ ಹೆಣ್ಣುಮಕ್ಕಳನ್ನು ವಿವಾಹವೆಂಬ ನೊಗಕ್ಕೆ ಕಟ್ಟಿ, ಅವರನ್ನು ಸಂಸಾರಿಕ ಬಂಧನಗಳಲ್ಲಿ ಕಟ್ಟಿಹಾಕುತ್ತಿದ್ದರು. ಹೆಣ್ಣಮಕ್ಕಳಿಗೆ ಶಿಕ್ಷಣವನ್ನು ನೀಡಿದರೂ, ಅದು ಅವರಿಗೆ ಮನೆಯಲ್ಲಿ ನೇರವೇರಿಸುವಂಥ ಕೆಲಸಗಳಿಗೆ ಸಂಬಂಧಿಸಿದ್ದಾಗಿತ್ತೇ ಹೊರತು, ಅವರಿಗೆ ಪ್ರಪಂಚಿಕ ಜ್ಞಾನವನ್ನು ನೀಡಲಾಗಲಿ, ಅವರ ಬದುಕಿನ ಮೇಲೆ ಅವರು ನಿಯಂತ್ರಣವನ್ನು ಸಾಧಿಸಲಾಗಲಿ ಅವರಿಗೆ ಆ ಶಿಕ್ಷಣ ನೇರವಾಗುತ್ತಿರಲಿಲ್ಲ. ಹೆಣ್ಣಿನ ಪ್ರಪಂಚ ಮನೆಗೇ ಮೀಸಲು. ಅವಳ ಜೀವನದ ಪ್ರಮುಖ ಗುರಿಗಳೆಂದರೆ ಹೆಂಡತಿಯಾಗಿ, ತಾಯಿಯಾಗಿ ತನ್ನ ಕರ್ತವ್ಯಗಳನ್ನು ನೆರವೇರಿಸುವುದು ಎಂಬ ನಂಬಿಕೆ ಇಂದಿಗೂ ಜೀವಂತವಾಗಿರುವಾಗ, ಶತಮಾನಗಳ ಹಿಂದೆ ಇನ್ನೆಷ್ಟು ಪ್ರಬಲವಾಗಿತ್ತು ಎಂಬುದನ್ನು ನಾವು ಊಹಿಸಬಹುದು.

ಬ್ರಿಟೀಷರು ಇಂಡಿಯಾದಲ್ಲಿ ಬಾಲ್ಯವಿವಾಹವು ದೀರ್ಘಕಾಲದಿಂದಲೂ ಒಂದು ಕಗ್ಗಂಟಿನ ಸಮಸ್ಯೆಯೆ ಆಗಿತ್ತು. ಬ್ರಿಟಿಷ್ ಮಿಷನರಿಗಳಿಗೂ ಅಧಿಕಾರಿಗಳಿಗೂ ಹುಡುಗಿ ಋತುಮತಿಯಾಗುವ ಮೊದಲೇ ನಡೆಯುವ ವಿವಾಹದ ಕಲ್ಪನೆಯೇ ಭಯಾನಕವೆನಿಸಿತು. ಆದರೆ ಅವರಿಗೆ ಭಾರತೀಯರು ವಿವಾಹದ ಮೊದಲು ವಿಧಿಹುಡುಗಿ ಋತುಮತಿಯಾಗುವ ಮೊದಲೇ ಆಗುತ್ತದಾದರೂ, ಎರಡನೆಯ ನಿಷೇಧಕ ವಿಧಿಯು ಆ ಹುಡುಗಿ ಋತುಮತಿಯಾದ ನಂತರದಲ್ಲೇ ಆಗುತ್ತದೆ. ಆಗಷ್ಟೇ ಗರ್ಭಾದಾನವಾಯಿತ್ತೆಂದಾಗುತ್ತದೆ ಎಂದು ವಿವರಿಸಿದರು. ೧೮೬೦ರಲ್ಲಿ ವಿವಾಹಿತ ಅಥವಾ ಅವಿವಾಹಿತ ಹುಡುಗಿಯರು ಈ ವಿಧಿಗೆ ಒಪ್ಪಿಗೆ ಕೊಡಬಹುದಾದ ವಯಸ್ಸು ಹತ್ತು ವರ್ಷಗಳು ಎಂದು ಕ್ರಿಮಿನಲ್ ಕೋಡನ್ನು ರೂಪಿಸಲಾಯಿತು. ಈ ವಿಷಯ ೧೮೮೦ರಲ್ಲಿ ಮತ್ತೊಮ್ಮ ಪ್ರಸ್ತಾಪಕ್ಕೆ ಬಂದು ಕೊನೆಗೆ ೧೮೯೧ರಲ್ಲಿ ಇದರಲ್ಲಿ ಸ್ವಲ್ಪ ತಿದ್ದುಪಡಿಯಾಗಿ ಈ ವಯಸ್ಸು ಹನ್ನೆರಡು ವರ್ಷಗಳಿಂದಾಗಬೇಕೆಂದು ಜಾರಿಗೊಳಿಸಲಾಯಿತು. ವಿವಾಹದ ವೇಳೆ ಕನ್ಯೆಗೆ ವಯಸ್ಸು ಎಷ್ಟಾಗಿದೆ ಎಂದು ಮುಕ್ತವಾಗಿ ಪ್ರಶ್ನಿಸಲು ಅವಕಾಶವಿತ್ತೆಂಬ ಸಂಗತಿಯಿಂದ ಬ್ರಟೀಷರು ಇಂಡಿಯಾವನ್ನು 'ನಾಗರಿಕ ವಾಗಿಸುವ ಧ್ಯೇಯ'ವನ್ನು ಜಾರಿಗೊಳಿಸಿದ್ದರೆಂಬ ಮಾತಿಗೆ ಗಟ್ಟಿ ನಿದರ್ಶನವೊಂದು ದೊರೆಯುತ್ತದೆ.

ವಿವಾಹದ ವಯಸ್ಸನ್ನು ಕುರಿತ ಆಸಕ್ತಿ ಕೂತುಹಲಗಳು ಲೀಗ್ ಆಫ್ ನೇಷನ್ಸ್ ಚರ್ಚೆಗಳಲ್ಲೂ ಪುನರಾವರ್ತನೆಯಾಗಿ ಕಾಣಿಸಿಕೊಂಡವು. ಭಾರತದ ಮಹಿಳೆಯರ ಬಗೆಗೆ ಹಾಗೂ ಬಾಲಕಿಯರ ಬಗೆಗೆ ಹೊಮ್ಮುತ್ತಿದ್ದ ಕಾಳಜಿಯು ವಿವಾಹ ವಯಸ್ಸಿನತ್ತಲೂ ಹೊರಳಿ ಕೊನೆಗೆ ಇಂಡಿಯನ್ ಅಸೆಂಬ್ಲಿಯಲ್ಲೂ

ಈ ಪ್ರಸ್ತಾವನೆಯನ್ನು ಮಂಡಿಸುವಂತಾಯಿತು. ಈ ಬಗೆಗೆ ಅದೆಷ್ಟೋ ಬಿಲ್‌ಗಳನ್ನು ಮಾಡಿಸಲಾಯಿತು. ಅಷ್ಟು ಸಲವೂ ಅದು ಬಿದ್ದುಹೋಯಿತು. ಕೊನೆಗೆ ೧೯೨೭ರಲ್ಲಿ ರಾಯ್ ಸಾಹಿಬ್ ಹರವಿಲಾಸ್ ಶಾರದಾರವರು ಹಿಂದೂ ಬಾಲ್ಯವಿವಾಹ ನಿಷೇಧ ಬಿಲ್ ಮಂಡಿಸಿದರು. ಅಷ್ಟು ಇದಾದ ಕೆಲವು ತಿಂಗಳುಗಳಲ್ಲಿ ಕೇಥರಿನ್ ಮೇಯೋ ಎಂಬ ಅಮೇರಿಕನ್ ಪತ್ರ್ರಕರ್ತೆ 'ಮದರ್ ಇಂಡಿಯಾ' ಎಂಬ ಲೇಖನವನ್ನು ಬರೆದು ಭಾರತೀಯರನ್ನು ಭಾರತದ ದುಷ್ಟ ಸಾಮಾಜಿಕ ಪದ್ಧತಿಗಳು ತೀವ್ರವಾಗಿ ಟೀಕಿಸಿದರು. ಆಸ್ಪತ್ರೆ ದಾಖಲೆಗಳು, ಅಧಿಕೃತ ಮಾಹಿತಿಗಳು ಹಾಗೂ ವೈಯಕ್ತಿಕ ಸಂದರ್ಶನಗಳನ್ನು ಬಳಸಿ ಆಕೆ ಹೊರಗೆಡಹಿದ ವಿಷಯಗಳಿಂದ ಅಮೇರಿಕ ಹಾಗೂ ಬ್ರಿಟೀಷ್ ಓದುಗರು ದಿಗ್ಭ್ರಾಂತರಾಗಿಬಿಟ್ಟರು. ಭಾರತದ ಪುರುಷರು ಮಹಿಳೆಯರನ್ನು ಅವರ ಬಾಲ್ಯದಿಂದ ವೃದ್ಧಾಪ್ಯದವರೆಗೂ ಅಮಾನುಷ ರೀತಿಯಲ್ಲಿ ನಡೆಸುತ್ತಾರೆಂದು ಚಿತ್ರಿಸಿದರು. ಅದರಲ್ಲೂ ಅವರು ನೀಡುವ ಲೈಂಗಿಕ ಹಿಂಸೆ ಭಯಾನಕವಾದುದು. ಇಲ್ಲಿನ ಬಾಲವಧೂಗಳು ತಮ್ಮ ವೃದ್ಧಪತಿಯರ ಅತ್ಯಾಚಾರದಿಂದ ಬಳಲುತ್ತಾರೆ ಎಂದೆಲ್ಲಾ ಬರೆದ ಆಕೆ ಇಲ್ಲಿನ ಸಾಮಾಜಿಕ ಪದ್ಧತಿಗಳನ್ನು ನೋಡಿದರೆ ಸಾಕು ಈ ಇಂಡಿಯಾದ ಜನಾಂಗದ ದೌರ್ಬಲ್ಯ ಸೃಷ್ಟಿಗೊಳ್ಳುತ್ತದೆ. ಇಂಥವರು ಸರ್ಕಾರವೊಂದನ್ನು ನಡೆಸಲು ಖಂಡಿತವಾಗಿ ಸಮರ್ಥರಲ್ಲ ಎಂದೆಲ್ಲಾ ಅಬ್ಬರಿಸಿದರು. ಇಂಡಿಯಾದ ಪುರುಷರಲ್ಲಿ ಕೆಲವರು ಈ ಬಗೆಯ ಧಾಳಿ ತಳವಿಲ್ಲದ ಅನ್ಯಾಯದ್ದು ಎಂದು ಆಪಾದಿಸಿದರು. ಇನ್ನೂ ಕೆಲವರು ಈ ದುಷ್ಟಪದ್ಧತಿಗಳನ್ನು ನಿವಾರಣೆ ಮಾಡಲು ನಾವು ಹೊರಟರೂ ಈ ಬ್ರಿಟೀಷ್ ಅಧಿಕಾರಿಗಳು ಅಡ್ಡಾಗಲು ಹಾಕಿ ಕುಳಿತಿದ್ದಾರೆ ಎಂದು ದೋಷಿಸಿದರು. ಇಂತಹ ದೂರು ಆಪಾದನೆಗಳಿಂದ ಮುಕ್ತರಾಗಲು ಸರ್ಕಾರ ಅಧಿಕಾರಿಗಳು ಸಂಸದರಲ್ಲಿ ಪ್ರಸ್ತಾಪವನ್ನು ಮಂಡಿಸತೊಡಗಿದರು. ಕೊನೆಗೊಮ್ಮೆ 'ಸಾಮಾಜಿಕ ಕಾಯಿದೆಗಳಿಗೆ ತಾವು ಬೆಂಬಲ ತೋರುತ್ತೇವೆ' ಎಂದು ಅವರು ಹೇಳಬೇಕಾಯಿತು.[೧]

ವಿವಾಹವೆಂಬುದು ಕುಟುಂಬಕ್ಕೆ ಸ್ಥಿರತೆಯನ್ನು ಒದಗಿಸುವ ಒಂದು ಮಹತ್ವಪೂರ್ಣ ಸಂಸ್ಥೆಯಾಗಿದೆ. ಎಲ್ಲ ಸಮಾಜಗಳಲ್ಲಿಯೂ ಒಂದಲ್ಲ ಒಂದು ರೀತಿಯ ವಿವಾಹಪದ್ಧತಿ ಇದುದನ್ನು ಮಾನವಶಾಸ್ತ್ರಜ್ಞರು ದಾಖಲಿಸಿದ್ದಾರೆ. ಭಾರತದಲ್ಲಿ ಬ್ರಹ್ಮ, ಆರ್ಶ, ದೈವ, ಪ್ರಜಾಪತ್ಯ, ಅಸುರ, ಗಾಂಧರ್ವ ರಾಕ್ಷಸ ಹಾಗೂ ಪೈಶಾಚವೆಂಬ ಎಂಟು ಬಗೆಯ ವಿವಾಹಗಳಿದ್ದುವೆಂದು ಹೇಳಲಾಗುತ್ತದೆ.

ಹಿಂದೂ ವಿವಾಹ ಪದ್ಧತಿಯನ್ನು ಒಂದು ಪವಿತ್ರ ಸಂಸ್ಕಾರವೆಂಬುದಾಗಿ ವ್ಯಾಖ್ಯಾನಿಸಲಾಗಿದೆ. ವಿವಾಹಗಳು ಜೀವನ ಧರ್ಮಕ್ಕಾಗಿ ನಡೆಸುವ ಸಂಸ್ಕಾರವಾಗಿವೆ. ಆದುದರಿಂದ ಧರ್ಮ, ಪ್ರಜಾ ಹಾಗೂ ರತಿ ಇವು ವಿವಾಹದ ಉದ್ದೇಶಗಳಾಗಿವೆ. ವಿವಾಹದ ಆಚರಣೆಯಲ್ಲಿ ಹೋಮ, ಪ್ರಾನಿಗ್ರಹಣ ಸಪ್ತಪದಿ ಇತ್ಯಾದಿ ಸಂಸ್ಕಾರಗಳಿವೆ. ವಿವಾಹವು ವಿಧಿಪೂರ್ವಕವಾದ ಆಚರಣೆಗಳ ಮೂಲಕ ತಲೆಮಾರುಗಳ ನಡುವಿನ

ಸಂಬಂಧವನ್ನು ಬಲಗೊಳಿಸುತ್ತದೆ. ಇದೊಂದು ಅಖಂಡ ಬಂಧನವಾಗಿದ್ದು, ಪಾತಿವ್ರತ್ಯದ ಮೌಲ್ಯವನ್ನು ಹಿಂದೂ ವಿವಹವು ಪ್ರತಿಪಾದಿಸುತ್ತದೆ. ಆದರೆ ವೈವಾಹಿಕ ಜೀವನಕ್ಕೆ ಸಂಬಂಧಿಸಿದಂತೆ ತಾತ್ವಿಕವಾಗಿ ಸರಿಯೆನಿಸಿದ ಅಂಶಗಳು ವಾಸ್ತವಿಕವಾಗಿ ಸರಿಯಾಗಿಲ್ಲ. ಅನೇಕ ಸಮಸ್ಯೆಗಳು ಸ್ತ್ರೀಯರ ಬದುಕನ್ನು ಕಾಡಿದ್ದವು. ಪರಿಣಾಮವಾಗಿ ಹಿಂದೂ ವಿವಾಹ ಪದ್ಧತಿಯಲ್ಲಿ ಸುಧಾರಣೆಗಳು ಅನಿವಾರ್ಯವೆನಿಸಿದವು. 'ಈ ದೃಷ್ಟಿಯಿಂದ ವಿವಾಹವನ್ನು ಪ್ರಭಾವಿಸಿದ ಮುಖ್ಯ ಅಂಶಗಳೆಂದರೆ ಕೈಗಾರೀಕರಣ, ನಗರೀಕರಣ ಹಾಗೂ ನಗರೀಕರಣ ಶಿಕ್ಷಣ ಹಾಗೂ ಕಾನೂನು ಕೈಗಾರೀಕರಣ ಹಾಗೂ ನಗರೀಕರಣದಿಂದಾಗಿ ಹೆಚ್ಚಿದ ವಲಸೆಯ ಪರಿಣಾಮವಾಗಿ ವಿವಾಹಿತರ ಪರಸ್ಪರ ಅಗಲಿಕೆ, ಕೊಳೆಗೇರಿಗಳ ದುಸ್ತರಬದುಕು, ಮಹಿಳಾ ಉದ್ಯೋಗ ಸ್ತ್ರೀ ಪುರುಷರ ನಡುವಿನ ಸಮಾನತೆಯ ಮೌಲ್ಯ, ಸಾಮಾಜಿಕ ಚಲನೆ ಇತ್ಯಾದಿ ಸಂಭವಿಸಿ ವೈವಾಹಿಕ ಬದುಕು ಅಭದ್ರತೆಗಳಿಗೀಡಾಗುತ್ತದೆ. ಇನ್ನೂ ಆಧುನಿಕ ಶಿಕ್ಷಣವು ವಿವಾಹ ಸಂಬಂಧಿಗಳ ಆಯ್ಕೆಯಲ್ಲಿ ಹಾಗೂ ಗಂಡ ಹೆಂಡಿರ ನಡುವಿನ ಸಂಬಂಧಗಳ ಸುಧಾರಣೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಇದು ವಿವಾಹದ ಮೌಲ್ಯಗಳನ್ನು ಪ್ರಭಾವಿಸಿದೆ. ಇನ್ನೂ ವಿವಾಹದ ವಯಸ್ಸು ಸಂಗಾತಿಯ ಆಯ್ಕೆ, ಏಕಸಂಗತಿ ವಿವಾಹವಿಚ್ಛೇದನೆ, ಪುನರ್ವಿವಾಹ ಹಾಗೂ ವರದಕ್ಷಿಣೆಗೆ ಸಂಬಂಧಿಸಿದ ಕಾನೂನುಗಳು ಹಿಂದೂ ವಿವಾಹವನ್ನು ತೀವ್ರವಾಗಿ ಪ್ರಭಾವಿಸಿವೆ. ಈ ಪ್ರಭಾವಗಳೇನೇ ಇದ್ದರೂ ಅವುಗಳಿಂದಾಗಿ ವೈವಾಹಿಕ ಸಮಸ್ಯೆಗಳು ಪರಿಹಾರವಾದುದಕ್ಕಿಂತ ಹೆಚ್ಚಾಗಿ ಹೊಸ ಸಮಸ್ಯೆಗಳು ಹುಟ್ಟಿಕೊಂಡಿವೆ'.[೨]

ಸ್ತ್ರೀಯ ಬದುಕಿನಲ್ಲಿ ವಿವಾಹ ಎನ್ನುವ ವಿಧಿ ಕಡ್ಡಾಯ ಎನ್ನುವ ಭಾವನೆಯನ್ನು ಹೆಚ್ಚು-ಕಡಿಮೆ ಎಲ್ಲ ಪೋಷಕರೂ ಹೊಂದಿದ್ದಾರೆ. ಹೀಗಾಗಿ ತಮ್ಮ ಮಗಳು ಲೈಂಗಿಕವಾಗಿ ಶೋಷಿಸಲ್ಪಟ್ಟು, ಅವಿವಾಹಿತ ತಾಯಾಗಿಬಿಟ್ಟರೆ ತಮ್ಮ ಕುಟುಂಬದ ಮರ್ಯಾದೆಗೆ ಧಕ್ಕೆ ಬಂದು ಇಡೀ ಜೀವನ ವ್ಯರ್ಥವಾಗಬಹುದೆಂಬ ಭಯದಿಂದಲೇ ಬಹುತೇಕ ಪೋಷಕರು ಆದಷ್ಟು ಸಣ್ಣವಯಸ್ಸಿನಲ್ಲಿಯೇ ಮಗಳ ವಿವಾಹವನ್ನು ಮಾಡಿ, ತಮ್ಮ ಜವಾಬ್ದಾರಿಯನ್ನು ಕಳೆದುಕೊಂಡು ಬಿಡಬೇಕೆಂದು ಹಂಬಲಿಸುವುದು. 'ಸ್ತ್ರೀಯ ಮೇಲೆ ಹಿಡಿತವನ್ನು ಸಾಧಿಸಲು ಲೈಂಗಿಕ ಆಕ್ರಮಣವನ್ನು ಒಂದು ಪ್ರಬಲ ಅಸ್ತ್ರವನ್ನಾಗಿ ಉಪಯೋಗಿಸುತ್ತಾ ಬಂದಿರುವ ಸಮಾಜದಲ್ಲಿ ಮಹಿಳೆಯರ ಮೇಲೆ ಅತ್ಯಾಚಾರ ಮಾಡುವುದು ಆಕೆಯ ಮೇಲೆ ಹತೋಟಿಯನ್ನು ಪಡೆಯುವ ಅಥವಾ ಆಕೆಯನ್ನು ದಮನಮಾಡುವ ಒಂದು ಕ್ರಮ. ಸಾರ್ವಜನಿಕ ಸಂಘರ್ಷ ಏರ್ಪಟ್ಟಾಗ ಕೂಡ ಮಹಿಳೆಯರ ಮೇಲೆ ಸಾಮೂಹಿಕ ಅತ್ಯಾಚಾರ ಮಾಡಿರುವಂಥ ನಿದರ್ಶನಗಳು ಬಹಳವಿದೆ. ಒಟ್ಟಿನಲ್ಲಿ ಮಹಿಳೆಯರು ಬದುಕಿನಲ್ಲಿ, ಆಕೆ ಅತ್ಯಂತ ಜಾಗರೂಕಳಾಗಿರಬೇಕಾದ್ದು 'ಲೈಂಗಿಕ ಆಕ್ರಮಣ'ದ ಬಗ್ಗೆ ಎನ್ನುವ ಕಲ್ಪನೆ ಸಮಾಜದಲ್ಲಿ ಎಲ್ಲೆಡೆ ಜಾಗೃತವಿರುವುದರಿಂದಲೇ ವಿವಾಹ ಎನ್ನುವ 'ಸುಭದ್ರ ಕೋಟೆ'ಯೊಳಗೆ ಹೆಣ್ಣುಮಕ್ಕಳನ್ನು ಸೇರಿಸಿಬಿಟ್ಟರೆ ಅವರು ಕ್ಷೇಮವಾಗಿರುತ್ತಾರೆ ಎಂಬ ನಂಬಿಕೆ ಅಷ್ಟೊಂದು ಬಲವಾಗಿ ಬೇರೂರಿರುವುದು'.[೩]

ವಿವಾಹದಿಂದ ಮಾತ್ರ ಸ್ತ್ರೀಯಾದವಳಿಗೆ ಮುಕ್ತಿ ವಿವಾಹೇತರ ಸಂಬಂಧಗಳು ನಿಯಮಬಾಹಿರವಾದದ್ದು ಎಂಬ ಭಾವನೆಗಳು ಎಲ್ಲಿಯವರೆಗೆ ಈ ಸಮಾಜದಲ್ಲಿ ಜ್ವಲಂತವಾಗಿರುತ್ತವೆಯೋ ಅಲ್ಲಿಯವರೆಗೆ ಅವಿವಾಹಿತ ತಾಯಂದಿರ ಸಮಸ್ಯೆ ಅವರವರಿಗೆ ಸ್ವತಂತ್ರವಿದೆ, ಅದು ಇತರರಿಗೆ ಸಂಬಂಧಿಸಿದ ವಿಷಯ ವಲ್ಲ ಎನ್ನುವ ಮನೋಭಾವವನ್ನು ವ್ಯಕ್ತಿಗಳು ಬೆಳೆಸಿಕೊಂಡಾಗ ಇತರರ ಬದುಕಿನಲ್ಲಿ ತಲೆ ಹಾಕುವಂಥ ಪ್ರವೃತ್ತಿಗಳು ದೂರವಾಗುತ್ತವೆ. ಆದರೆ ಅಂತಹ ಧೋರಣೆಗಳನ್ನು ಹೊಂದಿದಂಥ ವ್ಯಕ್ತಿಗಳು ಈ ಸಮಾಜದಲ್ಲಿ ಇರುವುದು ವಿರಳ.

ವಿವಾಹ ಸಂಗಾತಿಗಳ ಆಯ್ಕೆ ಇತ್ಯಾದಿ ವಿಷಯಗಳಲ್ಲಿಯೂ ನಗರೀಕರಣದಿಂದುಂಟಾದ ಪರಿಣಾಮಗಳು ಅಧ್ಯಯನ ಯೋಗ್ಯವಾಗಿದೆ. ಗ್ರಾಮೀಣ ಸಮಾಜದ ಅವಿಭಕ್ತ ಕುಟುಂಬಗಳಲ್ಲಿ ಸಾರ್ವತ್ರಿಕವಾಗಿ ಆಚರಣೆಯಲ್ಲಿದ್ದ 'ಏರ್ಪಟ್ಟ' ಅಥವಾ ನಿಯೋಜಿತ ವಿವಾಹಗಳು ಈಗ ಕಡಿಮೆಯಾಗಿವೆ. ನೂರಾರು ಹೊಸ ಸಂಪರ್ಕ ಬಂದಿದೆ. ಜಾತಿಯ ಹೊರಗೆ, ಕೆಲವೊಮ್ಮೆ ಕುಟುಂಬದ ಒಪ್ಪಿಗೆ ಇಲ್ಲದೇ ಮತ್ತೆ ಕೆಲವೊಮ್ಮೆ ವಿವಾಹ ಬಂಧನವಿಲ್ಲದೆ, ಗಂಡುಹೆಣ್ಣುಗಳ ಸಂಬಂಧ ಕುದುರುತ್ತಿವೆ. ಆದರೆ ಇವೆಲ್ಲ ಸಾರ್ವತ್ರಿಕವಾದ ಸಂಗತಿಗಳಲ್ಲ. ಅಲ್ಲದೇ ಇಂಥ ಸಂಬಂಧಗಳು ನಗರೀಕರಣವೊಂದರಿಂದಲೇ ಉದ್ಭವಿಸುದಿಲ್ಲ ಎಂಬುದನ್ನು ಮರೆಯಬಾರದು.

ಸಾಂಪ್ರದಾಯಕ ಕುಟುಂಬದಲ್ಲಿ ವಿವಾಹದ ಬಗ್ಗೆ ಮೌಲ್ಯಗಳು ಜಟಿಲವಾಗಿದ್ದವು. ವಿವಾಹವನ್ನು ಕುಟುಂಬದ ಹಿರಿಯರು ನಿರ್ಣಯಿಸುತ್ತಿದ್ದರು. ವಧುವರರಿಗೆ ಪರಸ್ಪರ ಆಯ್ಕೆಯ ವಿಚಾರದಲ್ಲಿ ಸ್ವಾತಂತ್ರ್ಯ ವಿರಲಿಲ್ಲ. ವಿಶೇಷತಃ ವಿವಾಹಗಳು ಕಳ್ಳುಬಳ್ಳಿಯಲ್ಲಿಯೇ ಆಗುತ್ತಿದ್ದವು. ಲೈಂಗಿಕ ವ್ಯವಹಾರಗಳಿಗೆ ನಿರ್ಬಂಧನೆ ಇತ್ತು. ಆದರೆ ಆಧುನಿಕ ಸಮಾಜದಲ್ಲಿ ವಿವಾಹದ ವಿಷಯದಲ್ಲಿ ಮೌಲ್ಯಗಳು ಬದಲಾಗುತ್ತಿವೆ. ವಧುವರರು ಪರಸ್ಪರ ಆಯ್ಕೆ ಬಗ್ಗೆ ವಿಚಾರಗಳನ್ನು ವ್ಯಕ್ತಪಡಿಸಬಹುದು. ಅಂತರ್ಜಾತಿಯ ವಿವಾಹಗಳಿಗೂ ಅನುಕೂಲವಿದೆ. ತಡವಾಗಿ ಲಗ್ನವಾಗಬಹುದು. ಲೈಂಗಿಕ ವ್ಯವಹಾರಗಳಲ್ಲಿ ನಿರ್ಬಂಧನೆ ಸಡಿಲಾಗಿದೆ. ವಿವಾಹ ಸಂಬಂಧಗಳು ಬೇರೆ ಬೇರೆ ಪ್ರದೇಶದವರೆಗೆ ಹಬ್ಬಬಹುದು. ಹೀಗಾಗಿ ಬದಲಾದ ವಿವಾಹ ಮೌಲ್ಯಗಳು ಕೌಟುಂಬಿಕ ಜೀವನದಲ್ಲಿ ಹೊಸ ರೀತಿಯನ್ನು ತರುತ್ತಿವೆ. ವಿಧವಾ ವಿವಾಹಗಳು ನೆರವೇರುತ್ತಿವೆ. ವಿವಾಹ ವಿಚ್ಛೇದನದಿಂದಾಗಿ ಕುಟುಂಬಗಳು ವಿಘಟಿತಗೊಳ್ಳುತ್ತಿವೆ ಹೀಗಾಗಿ ಆಧುನಿಕ ಸಮಾಜದಲ್ಲಿ ವಿವಾಹ ಪದ್ಧತಿಗಳು ಬದಲಾಗಿ ಕುಟುಂಬ ಜೀವನವೂ ಸಹ ಮಾರ್ಪಾಡುಗೊಳ್ಳುತ್ತದೆ.

ಪ್ರಾಚೀನ ಕಾಲದಿಂದಲೂ ಮಹಿಳೆಯರನ್ನು ಸಹನೆಯ ತಾಳ್ಮೆಯ ಮೂರ್ತಿ, ಮಮತೆಯದ್ಯೋತಕ, ತ್ಯಾಗಮೂರ್ತಿ, ನಿಸ್ವಾರ್ಥಮೂರ್ತಿ ಎಂಬೆಲ್ಲ ಮೌಲ್ಯಗಳಿಂದ ವೈಭವೀಕರಿಸಿ ಎಲ್ಲಾ ರೀತಿಯಿಂದಲೂ

ಅವಳನ್ನು ಶೋಷಿಸಲಾಗುತ್ತದೆ. ಇಂದು ಇಂತಹ ಬಣ್ಣನೇಯ ಮೌಲ್ಯಗಳು ಶೃಂಖಲೆಗಳನ್ನು ಕಿತ್ತೊಗೆದು ಮಹಿಳೆ ಹೊರಬರಬೇಕಾಗಿದೆ.

ಇಂದಿನ ಸಮಾಜದಲ್ಲಿ ಬದುಕಿ ಬಾಳಿನಲ್ಲಿ ಯಶಸ್ವಿಯಾಗಬೇಕೆಂದರೆ ಹೆಣ್ಣಿಗೆ ಧೈರ್ಯ, ಸ್ಥೈರ್ಯ, ಛಲ, ಚಾಕಚಕ್ಯತೆ, ಸ್ವತಂತ್ರಮನೋಭಾವನೆ, ವಿಮರ್ಶಾತ್ಮಕ ದೃಷ್ಟಿ ಇಂತಹ ಗುಣಗಳನ್ನು ಬೆಳಸಿಕೊಳ್ಳ ಬೇಕಾದ ಅಗತ್ಯವಿದೆ. ಇಂದಿನ ಬದಲಾಗುತ್ತಿರುವ ನಮ್ಮ ಸಮಾಜದಲ್ಲಿ ಒಂದು ಕಡೆ ಮಹಿಳೆಯರಿಗೆ ಶಿಕ್ಷಣ ಕ್ಷೇತ್ರದಲ್ಲಿ ಸಮಾನತೆ ಉದ್ಯೋಗಾವಕಾಶಗಳ ಹೆಚ್ಚಳ ಇದ್ದರೆ ಇನ್ನೊಂದು ಕಡೆಯಿಂದ ನೋಡಿದರೆ ಹೊರಗೆ ಹೋಗುವ ಮಹಿಳೆಯರಿಗೆ ಸುರಕ್ಷತೆ ಇಲ್ಲ ಮಹಿಳೆಗೆ ದೊರೆತ ಈ ಅವಕಾಶಗಳನ್ನು ಉಪಯೋಗಿಸಿಕೊಳ್ಳಲು ಕಷ್ಟಕರವಾದ ಪರಿಸ್ಥಿತಿ ನಿರ್ಮಾಣಗೊಂಡಿದೆ.

ಇಂದು ನಮ್ಮ ಸಮಾಜದಲ್ಲಿ ಸಹಸ್ರಾರು ಮಹಿಳೆಯರು ಎದುರಿಸುತ್ತಿರುವ ಅನೇಕ ಸಮಸ್ಯೆಗಳಿಗೆ ಮೂಲ ಕುಟುಂಬದಲ್ಲಿ ಅಡಗಿವೆ. ಪ್ರತಿಯೊಂದು ಮಗುವಿಗೆ ಮನೆಯೇ ಮೊದಲ ಪಾಠಶಾಲೆ ಮಗುವಿನ ಶಿಕ್ಷಣ ಪ್ರಾರಂಭವಾಗುವುದು ಕುಟುಂಬದಲ್ಲಿಯೇ ಕುಟುಂಬದಲ್ಲಿ ದೊರೆಯುವ ತರಬೇತಿ, ಶಿಕ್ಷಣ-ಸಾಮಾಜೀಕರಣ ಎಲ್ಲ ಸಮಸ್ಯೆಗಳಿಗೆ ಪರಿಹಾರ ದೊರಕಿಸಬಹುದು. 'ನಮ್ಮ ಸಂವಿಧಾನ ಹತ್ತಾರು ಕಾನೂನುಗಳನ್ನು ಮಾಡಿದ್ದರೂ ಅವುಗಳನ್ನು ಜಾರಿಗೆ ತರುವಲ್ಲಿ ನಾವು ವಿಫಲರಾಗಿದ್ದೇವೆ. ಆದರೆ ಕೇವಲ ಹೊರಗಿನಿಂದ ಹೇರಿದ ಕಾನೂನುಗಳು ಸಮಾಜದಲ್ಲಿ, ನಮ್ಮ ಜೀವನದ ರೀತಿನೀತಿಯಲ್ಲಿ ಬದಲಾವಣೆ ತರಲಾರವು. ನಮ್ಮ ದೃಷ್ಟಿಕೋನದಲ್ಲಿ ನಮ್ಮ ವಿಚಾರಸರಣಿಯಲ್ಲಿ ಮೂಲಭೂತವಾದ ಬದಲಾವಣೆಯಾಗ ಬೇಕಾದ ಅಗತ್ಯವಿದೆ. ಕೇವಲ ಕಾಗದದ ಮೇಲೆ ಬರೆದಿಟ್ಟ ಕಾನೂನುಗಳಾಗಲಿ, ಸರ್ಕಾರವಾಗಲಿ ಜನರ ವಿಚಾರದಲ್ಲಿ ಬದಲಾವಣೆಯಾಗದೇ ಯಾವ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಿಲ್ಲ. ಜನರ ಮನಃ ಪರಿವರ್ತನೆಯಾಗಬೇಕಾದರೆ ಮುಗ್ಧಮಕ್ಕಳಿಗೆ ಸರಿಯಾದ ಸಮಾಜೀಕರಣ ವಾಗಬೇಕು. ಬಾಲ್ಯದಿಂದಲೇ ಮಕ್ಕಳ ಮನಸ್ಸಿನಲ್ಲಿ ಉತ್ತಮ ವಿಚಾರಗಳನ್ನು ತುಂಬಬೇಕು. ಉತ್ತಮ ಮೌಲ್ಯಗಳ ಬೀಜ ಬಿತ್ತಲ್ಪಡಬೇಕು. ಈ ಗುರುತರವಾದ ಹೊಣೆ ಪ್ರಮುಖವಾಗಿ ತಾಯಿಂದಾಗಿದೆ. ಅದರ ಜೊತೆಗೆ ಕುಟುಂಬದ ಇತರ ಸದಸ್ಯರು ಸಮಾಜದ ಸದಸ್ಯರು ಇದರ ಹೊಣೆಗಾರರಾಗುವರು. ಆದ್ದರಿಂದ ಮಕ್ಕಳ ವ್ಯಕ್ತಿತ್ವ ನಿರ್ಮಾಣ ಮಾಡಬೇಕಾದ ತಾಯಿ ವಿದ್ಯಾವಂತಳು ಸುಶಿಕ್ಷಿತಳು ಆಗಿರಬೇಕಾದದ್ದು ಅತ್ಯವಶ್ಯಕ'.[೪] ಒಬ್ಬ ತಾಯಿ ನೂರಾರು ಶಿಕ್ಷಕಿಯರಿಗೆ ಸಮಾನಳು ಎನ್ನುವ ಮಾತಿನ ಅರ್ಥ ಇಲ್ಲಿ ಸುಸ್ಪಷ್ಟವಾಗಿದೆ. ನಮ್ಮ ದೇಶದಲ್ಲಿ ನೂರಕ್ಕೆ ಎಂಬತ್ತರಷ್ಟು ಮಹಿಳೆಯರು ಅನಕ್ಷರಸ್ಥರಿದ್ದಾರೆ. ಇಂದು ಮಹಿಳೆಯರಲ್ಲಿ ಸಾಕ್ಷರತೆಯನ್ನು ಹೆಚ್ಚಿಸಬೇಕಾದದ್ದು ನಮ್ಮೆಲ್ಲರ ಆದ್ಯಕರ್ತವ್ಯವಾಗಿದೆ. ಹಲವಾರು ಸಮಸ್ಯೆಗಳಿಗೆ ಮೂಲಕಾರಣವೆನಿಸಿದ ಮೂಢನಂಬಿಕೆಗಳನ್ನು ಅಂಧ ಆಚರಣೆಗಳನ್ನು ತಪ್ಪುಕಲ್ಪನೆಗಳನ್ನು ಹೋಗಲಾಡಿಸಲು ಮಹಿಳೆಯಲ್ಲಿ

ಸಾಕ್ಷರತೆಯನ್ನು ಹೆಚ್ಚಿಸುವುದು ಅವಶ್ಯಕ. ಮಹಿಳೆಯರ ಸಾಕ್ಷರತೆಯನ್ನು ಹೆಚ್ಚಿಸುವುದು ಅವಶ್ಯಕ. ಮಹಿಳೆಯ ಸಾಕ್ಷರತೆಯ ಜೊತೆಗೆ ಅವಳ ಆರ್ಥಿಕ ಸ್ವಾವಲಂಬನೆಯೂ ಅಷ್ಟೇ ಅವಶ್ಯಕವಿದೆ. ಎಲ್ಲಿಯವರೆಗೆ ಮಹಿಳೆ ಆರ್ಥಿಕವಾಗಿ ಪರಾವಲಂಬಿಯಾಗಿರುವಳೋ ಅಲ್ಲಿಯವರೆಗೆ ಅವಳು ಏನನ್ನೂ ಸಾಧಿಸಲಾರಳು.

ನಮ್ಮ ಸಂವಿಧಾನ ಮಹಿಳೆಯರ ರಕ್ಷಣೆಗಾಗಿ, ಅಭಿವೃದ್ಧಿಗೆ ಹಲವಾರು ಕಾನೂನುಗಳನ್ನು ಮಾಡಿದ್ದರೂ ಅವುಗಳ ಜ್ಞಾನವಿರುವ ಮಹಿಳೆಯು ಅತ್ಯಲ್ಪ ಬಹಳಷ್ಟು ಮಹಿಳೆಯರು ಇಂತಹ ಸೌಲಭ್ಯಗಲ ಬಗೆಗೆ ಅರಿವಿಲ್ಲದವರಾಗಿದ್ದಾರೆ. ಇದು ಅಲ್ಲದೆ ಸಂಪ್ರದಾಯ ವಿಚಾರಗಳನ್ನು ಹೊಂದಿದ ಈ ಮಹಿಳೆಯರು ತಮ್ಮ ಹಕ್ಕುಗಳಿಗಾಗಿ ಹೋರಾಡುವರೆಂದರೆ ಸಮಾಜದಲ್ಲಿ ಅಪಮಾನಕಾರಕ ಕೆಲಸವೆಂದು ಭಾವಿಸುವರು. ಶಿಕ್ಷಣದಿಂದ ಮಹಿಳೆಯರಲ್ಲಿ ಕಾನೂನಿನ ಜ್ಞಾನ ದೊರೆಯುವುದು ಮತ್ತು ಅವರಲ್ಲಿರುವ ತಪ್ಪುಕಲ್ಪನೆಗಳು ದೂರವಾಗಲೂ ಅವಕಾಶ ದೊರೆಯುವುದು. ಅಂದಾಗ ಮಾತ್ರ ಅವರು ತಮ್ಮ ಹಕ್ಕುಗಳನ್ನು ಪಡೆದುಕೊಳ್ಳಲು ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಮತ್ತು ಮುಂದಿನ ಜನಾಂಗವನ್ನು ಸರಿಯಾಗಿ ನಿರ್ಮಿಸಲು ಸಕ್ತರಾಗುವರು. ಮುಗ್ಧ ಮಹಿಳೆಯರು ಮೋಸಹೋಗಿ ತಮ್ಮ ಜೀವನವನ್ನೇ ಹಾಳು ಮಾಡಿಕೊಳ್ಳುವುದರಿಂದ ತಪ್ಪಿಸಿಕೊಳ್ಳಬಲ್ಲರು. ಸುಶಿಕ್ಷಿತ ಮಹಿಳೆ ತಾಯಿ, ತನ್ನ ಮತ್ತು ಕುಟುಂಬದ ಎಲ್ಲಾ ಸದಸ್ಯರ ಆಹಾರ, ಆರೋಗ್ಯ, ಶಿಕ್ಷಣ ಎಲ್ಲ ಈ ವಿಷಯಗಳ ಬಗೆಗೂ ಲಿಂಗಭೇದಮಾಡದೇ ಸಮಾನತೆಯ ದೃಷ್ಟಿಯಿಂದ ಕಾಣುವ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬಲ್ಲಳು.

**ಅಡಿಟಿಪ್ಪಣಿಗಳು**

೧. ಡಾ.ಎಚ್.ಎಸ್.ಶ್ರೀಮತಿ, ಆಧುನಿಕ ಭಾರತದಲ್ಲಿ ಮಹಿಳೆ, ೨೦೦೧, ಪು.೧೨೧-೧೨೨

೨. ಡಾ.ಚಂದ್ರಶೇಖರ ಬಿ.ದಾಮ್ಲೆ, ಭಾರತೀಯ ಸಾಮಾಜಿಕ ಅಧ್ಯಯನ, ಪು.೮೮

೩. ಡಾ.ಆರ್.ಇಂದಿರಾ, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪು.೫೮, ೮೨

೪. ವೀಣಾ ಸಂತನಗೌಡರ, ಮಹಿಳೆಯರ ಮೇಲಾಗುತ್ತಿರುವ ದೌರ್ಜನ್ಯಗಳು, ಕ.ವಿ.ವಿ, ಧಾರವಾಡ, ಜನವರಿ ೧೯೯೪.

## ಕ್ಷೇತ್ರಕಾರ್ಯಕ್ಕೆ ಬಳಸಲಾಗಿರುವ ಪ್ರದೇಶದ ವಿವರ

ಗುಲಬರ್ಗಾ ಜಿಲ್ಲೆಯು ಕರ್ನಾಟಕ ರಾಜ್ಯದ ಈಶಾನ್ಯಭಾಗದಲ್ಲಿದ್ದು, ೧೬-೧೨ ಮತ್ತು ೧೭-೪೬ ಉತ್ತರ ಅಕ್ಷಾಂಶ ಹಾಗೂ ೭೬-೦೪ ಮತ್ತು ೭೭-೪೨ ರೇಖಾಂಶಗಳ ಮಧ್ಯದಲ್ಲಿ ವಿಸ್ತರಿಸಲ್ಪಟ್ಟಿದೆ. ಸಮುದ್ರ ಮಟ್ಟದಿಂದ ಜಿಲ್ಲೆಯು ಸರಾಸರಿ ೬೯೩ ಮೀ. ಎತ್ತರದಲ್ಲಿ ಇರುತ್ತದೆ. ಜಿಲ್ಲೆಯ ಉತ್ತರ ಭಾಗದಲ್ಲಿ ಬೀದರ್, ಮಹಾರಾಷ್ಟ್ರ ರಾಜ್ಯದ ಉಸ್ಮಾನಾಬಾದ್ ಪೂರ್ವಭಾಗದಲ್ಲಿ ಆಂಧ್ರ ಪ್ರದೇಶದ ಮೇಡಕ ಹಾಗೂ ಮಹಬೂಬನಗರ, ದಕ್ಷಿಣದಲ್ಲಿ ರಾಯಚೂರು ಮತ್ತು ಪಶ್ಚಿಮದಲ್ಲಿ ಬಿಜಾಪುರ ಮತ್ತು ಮಹಾರಾಷ್ಟ್ರದ ಸೋಲಾಪುರ ಜಿಲ್ಲೆಗಳಿಂದ ಸುತ್ತುವರಿಯಲ್ಪಟ್ಟಿದೆ.

ರಾಜ್ಯದಲ್ಲಿ ಎರಡನೇ ದೊಡ್ಡ ಜಿಲ್ಲೆ ಎಂದೆನಿಸಿದ ಈ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶದ ೬,೨೨೪ಚ.ಕಿ.ಮೀ ಇದ್ದು, ರಾಜ್ಯದ ಶೇ.೮೫ರಷ್ಟು ಪ್ರದೇಶಗಳನ್ನೊಳಗೊಂಡಿದೆ. ಒಟ್ಟು ೧೩೭೮ ಹಳ್ಳಿಗಳಿದ್ದು, ಇವುಗಳಲ್ಲಿ ೧೨೯೫ ಜನವಸತಿಗಳಿದ್ದು, ೮೩ ಜನವಸತಿ ಇಲ್ಲದವು ಆಗಿವೆ. ೧೯೯೧ರ ಜನಗಣತಿಯ ಪ್ರಕಾರ, ೨೫,೮೨ ಲಕ್ಷ ಜನರಿದ್ದಾರೆ. ೧೩.೧೬ ಲಕ್ಷ ಜನರು ನಗರ ವಾಸಿಗಳಾಗಿದ್ದಾರೆ. ೧೯.೭೨ ಲಕ್ಷ ಜನರು ಗ್ರಾಮವಾಸಿಗಳಾಗಿದ್ದು, ಉಳಿದ ೬.೧೦ಲಕ್ಷ ಜನರು ನಗರವಾಸಿಗಳಾಗಿದ್ದಾರೆ. ೨೦೦೧ರ ಜನಗಣತಿಯ ಪ್ರಕಾರ ೩೧,೨೪,೫೮೨ ಜನಸಂಖ್ಯೆ ಹೊಂದಿದೆ. ಈ ಜಿಲ್ಲೆಯು ಜಿಲ್ಲೆ ಮತ್ತು ತಾಲೂಕುಗಳ ಆಡಳಿತ ವಿಭಾಗೀಯ ಕೇಂದ್ರವಾಗಿದೆ. ಗುಲಬರ್ಗಾ ವಿಭಾಗದಲ್ಲಿ ಬೀದರ್, ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಗಳ ಆಡಳಿತ ಒಂದು ವಿಭಾಗವಾಗಿದೆ. ಆಡಳಿತ ದೃಷ್ಟಿಯಿಂದ ೧. ಗುಲಬರ್ಗಾ ೨. ಸೇಡಂ ೩ಸ. ಯಾದಗಿರಿಯೆಂದು ಈ ಮೂರು ಉಪವಿಭಾಗಗಳನ್ನಾಗಿ ವಿಭಜಿಸಲಾಗಿದೆ. ಗುಲಬರ್ಗಾ ಉಪವಿಭಾಗದಲ್ಲಿ ತಲಾ ಮೂರು ತಾಲೂಕುಗಳಿವೆ. ಜಿಲ್ಲೆಯ ಕೇಂದ್ರ ಸ್ಥಳವಾದ ಗುಲಬರ್ಗಾ ನಗರವು ವಿಭಾಗದ ಕೇಂದ್ರಸ್ಥಾನವೂ ಆಗಿದೆ. ಜಿಲ್ಲೆಯಲ್ಲಿ ಒಟ್ಟು ೧೦ ತಾಲೂಕುಗಳು, ೧೨ ಪುರಸಭೆ ಹಾಗೂ ಒಂದು ಮಹಾನಗರ ಪಾಲಿಕೆ, ೪೮ ಕಂದಾಯ ಹೋಬಳಿಗಳು ಹಾಗೂ ೩೩೯ ಗ್ರಾಮಪಂಚಾಯಿತಿಗಳು ಇವೆ.

ಸಾಮಾನ್ಯವಾಗಿ ಶುಷ್ಕ ವಾತಾವರಣವಿದ್ದು, ಬೇಸಿಗೆಯ ಕಾಲದಲ್ಲಿ ಉಷ್ಣತೆ ೪೬ ಡಿಗ್ರಿ ಸೆಲ್ಸಿಯಸ್ ವರೆಗೆ ಇರುತ್ತದೆ. ಈ ಜಿಲ್ಲೆಯ ಮುಖ್ಯ ಬೆಳೆಗಳು ತೊಗರಿ, ಜೋಳ, ಸಜ್ಜೆ, ಶೇಂಗಾ, ಕಬ್ಬು, ಸೂರ್ಯಕಾಂತಿ, ಜಿಲ್ಲೆಯಲ್ಲಿ ಮುಖ್ಯವಾಗಿ ಕೃಷ್ಣಾ, ಭೀಮಾ, ಕಾಗಿಣಾ ದೋರಿ, ಅರ್ಮಜಾ ಹಾಗೂ ಮಲ್ಲಾಮಾರಿ ಎಂಬ ನದಿಗಳು ಹಿರಯುತ್ತವೆ. ಶಹಾಬಾದನಲ್ಲಿ ಪರ್ಸಿ ಮತ್ತು ಸುಣ್ಣದ ಕಲ್ಲು

ಹೇರಳವಾಗಿ ಸಿಗುತ್ತವೆ. ಜಿಲ್ಲೆಯ ೬ ದೊಡ್ಡ ಮತ್ತು ಮಾಧ್ಯಮ ಸೀಮೆಂಟ್ ಕಾರ್ಖಾನೆಗಳಿವೆ. ೧೦೪೬ ಸಹಕಾರ ಸಂಘಗಳಿದ್ದು, ಸುಮಾರು ೫,೫೫ ಲಕ್ಷ ಸದಸ್ಯರಿದ್ದಾರೆ.

**ಐತಿಹಾಸಿಕ ಹಿನ್ನೆಲೆ**

ಗುಲಬರ್ಗಾ ಜಿಲ್ಲೆಯು ಪ್ರಾಚೀನ ಕಾಲದಿಂದಲೂ ತನ್ನದೇ ಆದ ವೈಶಿಷ್ಟ್ಯಗಳನ್ನು ಹೊಂದಿದೆ. ಕನ್ನಡ ನಾಡಿನ ಅವಿಭಾಜ್ಯ ಅಂಗವಾದ ಈ ಪ್ರದೇಶಕ್ಕೆ ಎರಡು ಸಾವಿರ ವರ್ಷಗಳಿಗಿಂತಲೂ ದೀರ್ಘ ಇತಿಹಾಸ ಮತ್ತು ಸಂಸ್ಕೃತಿಯ ಪರಂಪರೆ ಇದೆ. ಕಲುಬುರ್ಗಿ ಎಂಬ ಶಬ್ದವು ೧೧ನೇ ಶತಮಾನದಲ್ಲಿ ಈ ಭಾಗವನ್ನಾಳಿದ ಚಾಲುಕ್ಯ ಚಕ್ರವರ್ತಿ ೬ನೇ ವಿಕ್ರಮಾದಿತ್ಯನು ಹೊರಡಿಸಿದ ಹುಣಸಿ ಹಡಗಿಲ್ ನಲ್ಲಿರುವ ಶಿಲಾಲೇಖನದಲ್ಲಿ ಕಲ್ಲಂಬುರ್ಗಿ ಎಂದು ಉಲ್ಲೇಖಿಸಲಾಗಿದೆ.

೧೪ನೇ ಶತಮಾನದಲ್ಲಿ ಬಹುಮನಿ ಸುಲ್ತಾನರ ರಾಜಧಾನಿಯಾದ ನಂತರ ಇದಕ್ಕೆ ಗುಲಬರ್ಗಾ ಎಂದು ಹೊಸ ನಾಮಕರಣ ಮಾಡಿದರು. ಪರ್ಶಿಯನ್ ಶಬ್ದ ಸಂಯೋಗ ಪದಗಳಾದ ಗುಲ್ ಮತ್ತು ಬರ್ಗಾ ಎಂದರೆ ಹೂವು ಮತ್ತು ಬಳ್ಳಿಯೆಂದು ಅರ್ಥವಿದೆ. ಮಾನ್ಯಖೇಡದ ರಾಷ್ಟ್ರಕೂಟರು ಕಲ್ಯಾಣದ ಚಾಲುಕ್ಯರು, ಕಲಚೂರಿಗಳು ಅಲ್ಲೂರಿನ ಹೈದರರು, ದೇವಗಿರಿಯ ಮಾಧವರು, ಬಹುಮನಿಯ ಸುಲ್ತಾನರು ಈ ನೆಲೆದ ಏಳು ಬೆಳಗಳಿಗೆ ಕಾರಣರಾಗಿದ್ದಾರೆ. ಕಲಬುರ್ಗಿಯ ಕೋಟೆ, ಸಾತ್ ಗುಂಬಚ್ , ಚೋರ್ ಗುಂಬಜ್, ಖಾಜಾ ಬಂದೇ ನವಾಜ್ ದರ್ಗಾ ಶರಣಬಸವೇಶ್ವರ ದೇವಾಲಯ ಈ ನಾಡಿನ ಕಾಲ ಪ್ರಜ್ಞೆಗೆ ಸಾಕ್ಷಿಯಾಗಿವೆ.

ಕಾನೂನು ತಜ್ಞ ವಿಜ್ಞಾನೇಶ್ವರರು ಕಲುಬುರ್ಗಿ ಜಿಲ್ಲೆಯ ಮರತೂರಿನವರು. ಸ್ವಾತಂತ್ರ್ಯ ಪೂರ್ವೋತ್ತರ ಕಾಲಖಂಡದಲ್ಲಿ ಕಲ್ ಬುರ್ಗಿ ಭಾಗದಲ್ಲಿ ಅನೇಕ ಜನ ಸ್ವಾತಂತ್ರ್ಯ ಹೋರಾಟಗಾರರು, ಮಠಾಧೀಶರು, ರಾಜರು, ಸಮಾಜ ಸುಧಾರಕರು ಮತ್ತು ಶಿಕ್ಷಣ ಪ್ರೇಮಿಗಳು ಇಲ್ಲಿ ಆಗಿಹೋಗಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿಯೇ ಶೈಕ್ಷಣಿಕ ಕ್ರಾಂತಿ ಮಾಡಿದ ಶಿಕ್ಷಣ ಪ್ರೇಮಿಯೆಂದರೆ ಪೂಜ್ಯ ದೊಡ್ಡಪ್ಪ ಅಪ್ಪನವರು. ೨,೪೯೪ ಪ್ರಾಥಮಿಕ ಶಾಲೆಗಳು, ೫೯೨ ಪ್ರೌಢಶಾಲೆಗಳು, ೬೨ ಪದವಿಪೂರ್ವ ಕಾಲೇಜುಗಳು, ೪೯ ಡಿಗ್ರಿಕಾಲೇಜುಗಳು, ೭ ಪಾಲಿಟೆಕ್ನಿಕ್ ಕಾಲೇಜುಗಳು ಮತ್ತು ೭ ಇಂಜಿನಿಯರಿಂಗ್ ಕಾಲೇಜುಗಳು, ೩ ವೈದ್ಯಕೀಯ ಕಾಲೇಜು, ೨ ದಂತ ವೈದ್ಯಕೀಯ ಕಾಲೇಜು, ೧ ನರ್ಸಿಗ್ ಕಾಲೇಜು, ೩ ಔಷಧಿಗಳ ಕಾಲೇಜು, ೧ ಹೋಮಿಯೋಪಥಿಕ್ ಕಾಲೇಜು ಹಾಗೂ ವಿಶ್ವವಿದ್ಯಾಲಯ. ವಿದ್ಯಾಕ್ಷೇತ್ರದಲ್ಲಿ ಸೇವೆ ಸಲ್ಲಿಸುತ್ತಿದ್ದು, ಈ ಕ್ಷೇತ್ರದ ಮತ್ತೊಂದು ಅತ್ಯಂತ ಆಕರ್ಷಣೀಯ ಸ್ಥಳವೆಂದರೆ ವಿಶಾಲವಾದ ಆವರಣದಲ್ಲಿಕಂಗೊಳಿಸುತ್ತಿರುವ ಜ್ಞಾನಗಂಗೆಯಾದ ಗುಲಬರ್ಗಾ ವಿಶ್ವವಿದ್ಯಾಲಯ ಉನ್ನತ ಶಿಕ್ಷಣವನ್ನು ಧಾರೆಯೆರೆಯುತ್ತಾ ಬಂದಿದೆ. ಈ ವಿಶ್ವಿವಿದ್ಯಾಲಯದ ಇನ್ನೊಂದು ವಿಶೇಷವೆಂದರೆ, ಮಹಿಳೆಯರು ತಮ್ಮ

ಸ್ಥಾನಮಾನ ಅರಿತುಕೊಳ್ಳಲು ೧೯೯೭-೯೮ನೇ ಸಾಲಿನಲ್ಲಿ ನೂತನವಾಗಿ ಪ್ರಾರಂಭಗೊಂಡ ಮಹಿಳಾ ಅಧ್ಯಯನ ವಿಭಾಗವಾಗಿದೆ. ಇದಕ್ಕೆ ಕಾರಣಿಭೂತರಾಗಿರುವ ವಿಶ್ವವಿದ್ಯಾಲಯದ ಮಹಿಳಾ ಕುಲಪತಿಗಳಾದ ಡಾ.ಎಂ.ಮುನಿಯಮ್ಮನವರು ಮಹಿಳೆಯ ಅಮೂಲ್ಯವಾದ ಸೇವೆಯನ್ನು ಅಪಾರವಾದುದೆಂದು ಪರಿಗಣಿಸಿ ಮಹಿಳೆಯರ ಪ್ರತಿಯೊಂದು ಕೆಲಸಕ್ಕೂ ಶ್ರಮವಹಿಸಿದರು. ಸಧ್ಯದ ಕುಲಪತಿಗಳಾದ ಪ್ರೋ.ಎ.ವಿ.ಕುಟಿನೋರವರು ಕೂಡ ಈ ಮಹಿಳಾ ಅಧ್ಯಯನ ವಿಭಾಗವನ್ನು ಉನ್ನತ ಮಟ್ಟಕ್ಕೇರಿಸಲು ಶ್ರಮಿಸುತ್ತಿದ್ದಾರೆ.

## ಕ್ಷೇತ್ರಕಾರ್ಯಕ್ಕಾಗಿ ಆಯ್ಕೆ ಮಾಡಿಕೊಂಡ ಗ್ರಾಮದ ಪಕ್ಷಿನೋಟ

ಗುಲಬರ್ಗಾ ತಾಲೂಕಿನಲ್ಲಿ ಬರುವ ಕೆರೆಭೋಸಗಾ ಎನ್ನುವುದು ಒಂದು ಚಿಕ್ಕಗ್ರಾಮ. ಈ ಗ್ರಾಮವು ಗುಲಬರ್ಗಾ ನಗರಕ್ಕೆ ಕೇವಲ ೧೦-೧೨ ಕಿ.ಮೀ. ಅಂತರದಲ್ಲದೆ. ೧೯೯೧ರ ಜನಗಣಿತಿಯ ಪ್ರಕಾರ ಈ ಗ್ರಾಮದ ಜನಸಂಖ್ಯೆ ೩೦೩೦ ಇದ್ದರೆ ಸುಮಾರು ೫೦೦ ಮನೆಗಳಿದ್ದು, ಗ್ರಾಮದ ಬಹುಪಾಲು ಜನರು ಕೃಷಿಯನ್ನೇ ಅವಲಂಬಿಸಿರುತ್ತಾರೆ. ಈ ಕೃಷಿಗೆ ಯಾವುದೇ ತೆರನಾದ ನೀರಾವರಿ ಸೌಕರ್ಯ ಇರುವುದಿಲ್ಲ. ಆದ್ದರಿಂದಲೇ ಇಲ್ಲಿಯ ಕೃಷಿಯು ಪ್ರಕೃತಿದತ್ತವಾಗಿ ಬರುವ ಮಳೆಯನ್ನೇ ಅವಲಂಬಿಸಿರುತ್ತಾರೆ. ಈ ಒಂದು ಹಳ್ಳಿಯ ವಿಶೇಷವೆಂದರೆ ಇಲ್ಲಿ ಕೆರೆಯಿರುವುದು ಈ ಕೆರೆಯಲ್ಲಿ ಯಾವಾಗಲೂ ಸತತವಾಗಿ ನೀರು ಇರುತ್ತವೆ. ಮಳೆಗಾಲದಲ್ಲಿ ಅಂತೂ ಈ ಕೆರೆಪೂರ್ಣ ತುಂಬಿ ಹರಿದರೆ ಬೇಸಿಗೆಯಲ್ಲಿ ಸ್ವಲ್ಪ ನೀರಿನ ಪ್ರಮಾಣವು ಕಡಿಮೆಯಾಗುತ್ತದೆ. ಈ ಕೆರೆಯ ನೀರು ಗುಲಬರ್ಗಾ ನಗರಕ್ಕೂ ಕೂಡ ಸರಬರಾಜು ಆಗುತ್ತಿರುತ್ತದೆ.

ಕೆರೆ ಭೋಸಗಾ ಗ್ರಾಮದಲ್ಲಿ ಎರಡು ಶಾಲೆಗಳಿವೆ. ೧೯೭೫ರಲ್ಲಿಯೇ ಪ್ರಾರಂಭಗೊಂಡ ಶಾಲೆಯೊಂದರಲ್ಲಿ ೧ನೇ ತರಗತಿಯಿಂದ ೫ನೇ ತರಗತಿಯವರೆಗೆ ಮಾತ್ರ ಇತ್ತು. ಆವಾಗಲೇ ಕೇವಲ ೪ ಕೊಠಡಿಗಳನ್ನು ಹೊಂದಿದ್ದರೂ ಕೂಡ ಬಹಳಷ್ಟು ವಿದ್ಯಾರ್ಥಿಗಳನ್ನು ದಾಖಲಾತಿ ಮಾಡಿಕೊಂಡಿದ್ದಾರೆ. ಇಲ್ಲಿಯ ಶಿಕ್ಷಕರ ಸಂಖ್ಯೆಯಲ್ಲಿ ಒಂದು ಶಾಲೆಯಲ್ಲಿ ೫ ಜನ ಇದ್ದು ಅದರಲ್ಲಿ ೪ ಶಿಕ್ಷಕಿಯರು ೨ ಶಿಕ್ಷಕರು. ಇನ್ನೊಂದು ಶಾಲೆಯಲ್ಲಿ ೬ ಜನರಿದ್ದು, ೩ ಜನ ಶಿಕ್ಷಕೀಯರು, ೩ ಜನ ಶಿಕ್ಷಕರು. ಒಂದು ಅಂಗನವಾಡಿ ಕೇಂದ್ರವಿದೆ. ಶಾಲೆಯ ವ್ಯವಸ್ಥೆ, ಶಿಕ್ಷಣ ಚೆನ್ನಾಗಿ ಇದೆ. ಈ ಊರಿನಲ್ಲಿ ಸಾರಿಗೆ ಸಂಪರ್ಕಕ್ಕೆ ಯಾವುದೇ ತೊಂದರೆ ಇಲ್ಲ. ಉನ್ನತ ಶಿಕ್ಷಣವನ್ನು ಪಡೆಯಲು ನಗರಕ್ಕೆ ಬರುತ್ತಾರೆ. ಅದು ಕೂಡ ಬಹಳ ದೂರವಿರದ ಕಾರಣದಿಂದ ಈ ಗ್ರಾಮದ ಜನರೆಲ್ಲರೂ ಶಿಕ್ಷಿತರಾಗಿದದ್ದು ಕಂಡುಬರುತ್ತದೆ. ಪ್ರಮುಖ ದೇವಾಲಯಗಳೆಂದರೆ ಮಾರಮ್ಮ, ದುರಗಮ್ಮ, ಕಾಳಮ್ಮ, ಮಾರುತಿ, ಲಕ್ಷ್ಮೀ, ಶಿವಾ ದೇವಾಲಯಗಳಿವೆ. ವಿದ್ಯುತ್, ದೂರವಾಣಿ ಸಂಪರ್ಕ ವ್ಯವಸ್ಥೆ ಇರುವುದರಿಂದ ಜನರಿಗೆ ಯಾವುದೇ ರೀತಿಯ ತೊಂದರೆಲ್ಲ. ಇಲ್ಲಿಯ

ಬೆಳೆಯು ಕೂಡ ಚೆನ್ನಾಗಿದೆ. ಇಲ್ಲಿಯ ಮಹಿಳೆಯರು ಎಲ್ಲಾ ಸೇರಿ ಎರಡು ಸಂಘಸಂಸ್ಥೆಗಳನ್ನು ಕಟ್ಟಿಕೊಂಡು ತಮ್ಮ ಜೀವನದಲ್ಲಿ ಸಾಕಷ್ಟು ಮುಂದೆ ಬಂದಿದ್ದಾರೆ.

ಸಂಘದಲ್ಲಿ ಇರುವಂತಹ ಎಲ್ಲಾ ಮಹಿಳೆಯರು ೧ ವಾರದಲ್ಲಿ ೧ ದಿನ ಸೇರಿ ಸಾಕಷ್ಟು ಮಹಿಳೆಯರ ಸಮಸ್ಯೆ ಮತ್ತು ವಿಷಯಗಳ ಬಗ್ಗೆ ತಿಳಿದುಕೊಂಡಿರುವುದು ಆಶ್ಚರ್ಯಕರವಾದ ಸಂಗತಿಯಾಗಿದೆ. ಈ ಗ್ರಾಮದಲ್ಲಿ ಗ್ರಾಮಪಂಚಾಯಿತ್ ಇರುವುದರಿಂದಾಗಿ ಗ್ರಾಮ ಪಂಚಾಯತ್ ಚುನಾವಣೆಯಲ್ಲಿಯೂ ಮಹಿಳೆಯರು ಹೆಚ್ಚಾಗಿ ಭಾಗವಹಿಸುತ್ತಿದ್ದಾರೆ. ಗ್ರಾಮದ ಎಲ್ಲಾ ಕುಟುಂಬದವರ ಮೂಲತಃ ವೃತ್ತಿ ವ್ಯವಸಾಯ ಪ್ರಧಾನವಾಗಿರುವವರೇ ಹೆಚ್ಚಾಗಿ ಕಂಡುಬಂದರೂ ಸಹ ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಈ ಗ್ರಾಮದ ಮಹಿಳೆಯರು ತಮ್ಮನ್ನು ತಾವು ಅಭಿವೃದ್ಧಿಗೊಳಿಸಿಕೊಳ್ಳುವಲ್ಲಿ ತೊಡಗಿಸಿಕೊಂಡಿದ್ದಾರೆ.

## ಕ್ಷೇತ್ರಕಾರ್ಯದ ಮಾಹಿತಿಯ ಅಂಕಿ-ಅಂಶಗಳ ವಿಶ್ಲೇಷಣೆ

### ಹೆಣ್ಣುಮಕ್ಕಳ ಶಿಕ್ಷಣ ಮತ್ತು ವಿವಾಹ ವಯಸ್ಸಿಗಿರುವ ಸಂಬಂಧ

. ಶಿಕ್ಷಣವು ವ್ಯಕ್ತಿಯ ವ್ಯಕ್ತಿತ್ವದ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸುತ್ತದೆ. ಹೆಣ್ಣುಮಕ್ಕಳ ವಿವಾಹ ಸಮಸ್ಯೆಗೂ ಹಾಗೂ ಶಿಕ್ಷಣಕ್ಕೂ ಬಹಳ ನಿಕಟವಾದ ಸಂಬಂಧವಿದೆ. ಬಾಲ್ಯವಿವಾಹ ಮಾಡುವುದರಿಂದಾಗಿ ಮಹಿಳೆಯರ ಶಿಕ್ಷಣವೇ ಪೂರ್ಣ ನಿಂತು ಹೋಗುವುದು ಎಂದು ಅರಿತ ಸರ್ಕಾರವು ಈ ಮೊದಲಿನಿಂದಲೂ ಮತ್ತು ಸಧ್ಯದ ಪರಿಸ್ಥಿತಿಯಲ್ಲಿಯೂ ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದೆ ಈಗಲೂ ನೀಡುತ್ತದೆ. ಇದರ ಪ್ರಯೋಜನ ಎಷ್ಟು ಮಹಿಳೆಯರು ಪಡೆದುಕೊಳ್ಳುತ್ತಾರೆ ಎನ್ನುವುದಕ್ಕೆ ಈ ಕೋಷ್ಟಕ ಮಾಹಿತಿಯನ್ನು ಕುರಿತು ಸಮರ್ಥನೆ ಮಾಡುವುದಾಗಿದೆ.

**ಕೋಷ್ಟಕ ೧**

| ಶಿಕ್ಷಣ | ಮಹಿಳೆಯರ ಸಂಖ್ಯೆ | ಸರಾಸರಿ ವಿವಾಹ ವಯಸ್ಸು |
|---|---|---|
| ಅನಕ್ಷರತೆ | ೦೪ | ೧೬ |
| ಪ್ರಾಥಮಿಕ | ೧೬ | ೧೯ |
| ಪ್ರೌಢಶಾಲೆ | ೨೪ | ೧೭ |
| ಕಾಲೇಜು | ೫೬ | ೧೫ |

ಶಿಕ್ಷಣದ ಪ್ರಾಮುಖ್ಯತೆಯು ಪುರುಷರಿಗಿಂತ ಹೆಚ್ಚಾಗಿ ಮಹಿಳೆಯರಿಗೆ ಹೆಚ್ಚು ಅವಶ್ಯಕ ಎಂದು ಕೆಲವು ಇತ್ತೀಚಿನ ಅಧ್ಯಯನಗಳ ಮುಖಾಂತರ ತಿಳಿದುಬಂದಿದೆ. ಈ ಹಿನ್ನೆಲೆಯಲ್ಲಿ ನಮ್ಮ ಅಧ್ಯಯನದ ಮಾಹಿತಿದಾರರ ಶೈಕ್ಷಣಿಕ ಮಟ್ಟವನ್ನು ತಿಳಿಯುವುದು ಅತೀ ಅವಶ್ಯಕ. ಇದುವರೆಗಿನ ಅಧ್ಯಯನಗಳು ಶಿಕ್ಷಣ ಹಾಗೂ ವಿವಾಹ ವಯಸ್ಸಿನ ನಡುವೆ ನೇರ ಸಂಬಂಧವಿರುವುದಾಗಿ ಪ್ರತಿಪಾದಿಸುತ್ತವೆ. ಆದರೆ ಪ್ರಸ್ತುತ ಅಧ್ಯಯನವು ಈ ತಿಳುವಳಿಕೆಗಿಂತ ಭಿನ್ನವಾದ ಪರಿಣಾಮವನ್ನು ತೋರಿಸುತ್ತಿದೆ. ಈ ಅಧ್ಯಯನದ ಪ್ರಕಾರ ಶಿಕ್ಷಣವು ವಿವಾಹ ವಯಸ್ಸಿನ ಮೇಲೆ ಹೆಚ್ಚಿನ ನಿಯಂತ್ರಣವನ್ನು ಹೊಂದಿರುವಂತೆ ಕಾಣುವುದಿಲ್ಲ. ಉದಾ. ಅನಕ್ಷರಸ್ಥರ ಹಾಗೂ ಕಾಲೇಜು ಶಿಕ್ಷಣ ಪಡೆದವರ ಸರಾಸರಿ ವಿವಾಹ ವಯಸ್ಸು ಹೆಚ್ಚು ಕಡಿಮೆ ಒಂದೇ ಅಂದರೆ ೧೬ ೧೫ ವರ್ಷಗಳು. ಹಾಗೆ ನೋಡಿದರೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣ ಪಡೆದವರ ಸರಾಸರಿ ವಿವಾಹ ವಯಸ್ಸು ಹೆಚ್ಚಿದೆ ಅಂದರೆ ೧೯ ೧೭ ವರ್ಷಗಳು. ಈ ಅಂಶವನ್ನು ಗಮನಿಸುವುದಾದರೆ ನಮ್ಮ ಸಮಾಜದಲ್ಲಿ ಹೆಣ್ಣುಮಕ್ಕಳ ವಿವಾಹ ವಯಸ್ಸು ಶಿಕ್ಷಣವನ್ನು ಕ್ವಚಿತ್ತಾಗಿ ಮಾತ್ರ ಅವಲಂಬಿಸಿದ್ದು ಅದನ್ನು ನಿರ್ಧರಿಸುವ ಅಂಶಗಳು ಶಿಕ್ಷಣೇತರ ನೆಲೆಯಾಗಿದೆ. ಅದು ಯಾವುದು ಎಂಬುದನ್ನು ಮುಂದಿನ ಅಧ್ಯಯನದಲ್ಲಿ ಗುರುತಿಸಲಾಗಿದೆ.

**ಉದ್ಯೋಗ ಮತ್ತು ಮಹಿಳೆಯರ ವಿವಾಹ ವಯಸ್ಸಿನ ಸಂಬಂಧ**

ಮನುಷ್ಯನಿಗೆ ಶಿಕ್ಷಣವೆಷ್ಟು ಮುಖ್ಯವೋ ಅಷ್ಟೇ ಮುಖ್ಯವಾಗಿ ಅವರ ಆರ್ಥಿಕ ಜೀವನಮಟ್ಟವನ್ನು ತಿಳಿದುಕೊಳ್ಳುವುದು ಅತ್ಯವಶ್ಯಕ. ಯಾವುದೇ ಒಂದು ಕ್ಷೇತ್ರಾಧರಿತ ಅಧ್ಯಯನವನ್ನು ಕೈಗೊಂಡಾಗ ಜನರ ಆರ್ಥಿಕ ಹಿನ್ನೆಲೆ ತಿಳಿಯುವುದು ಮುಖ್ಯವಾಗಿರುತ್ತದೆ ಏಕೆಂದರೆ ಪ್ರತಿಯೊಂದು ಸಮಾಜದಲ್ಲಿಯೂ ವಿಭಿನ್ನವಾದ ಜಾತಿ ಸಮುದಾಯಕ್ಕೆ ಸೇರಿದ ಜನರ ವಿಭಿನ್ನವಾದ ಜೀವನಮಟ್ಟವನ್ನು ಹೊಂದಿರುತ್ತಾರೆ.

**ಕೋಷ್ಟಕ ೨**

| | ಮಹಿಳೆಯರ ಸಂಖ್ಯೆ | ಸರಾಸರಿ ವಿವಾಹ ವಯಸ್ಸು |
|---|---|---|
| ಗೃಹಿಣಿ | ೪೦ | ೧೬ |
| ಉದ್ಯೋಗಸ್ಥರು | ೬೦ | ೧೯ |

ಈ ಎಲ್ಲಾ ಮೇಲಿನ ಅಂಶದ ವಿಷಯಗಳನ್ನು ಗಮನದಲ್ಲಿರಿಸಿಕೊಂಡು ಪ್ರಸ್ತುತ ಅಧ್ಯಯನದಲ್ಲಿ ಮಹಿಳೆಯರ ಸಾಮಾಜಿಕ, ಆರ್ಥಿಕ ಹಿನ್ನೆಲೆಯನ್ನು ತಿಳಿಯಲು ಪ್ರಯತ್ನಿಸಲಾಗಿದೆ. ನಿರ್ದಿಷ್ಟವಾಗಿ ಈ ಅಧ್ಯಯನದಲ್ಲಿ ಮಹಿಳಾ ಮಾಹಿತಿದಾರರ ಸರಾಸರಿ ವಿವಾಹ ವಯಸ್ಸಿನೊಂದಿಗೆ ಅವರ ಗೃಹಿಣಿ ಮತ್ತು

ಉದ್ಯೋಗದಲ್ಲಿಯ ಬದಲಾವಣೆಯ ಬಗ್ಗೆ ಸಂಕ್ಷಿಪ್ತ ವಿವರಣೆಯನ್ನು ಈ ಕೋಷ್ಟಕ ಸಮರ್ಥನೆಯನ್ನು ನೀಡುತ್ತದೆ. ಉದ್ಯೋಗ ಮಾಡುವವರ ಸರಾಸರಿ ವಿವಾಹ ವಯಸ್ಸು ೧೯ ವರ್ಷಗಳು ಆಗಿರುವುದರಿಂದಾಗಿಯೇ ಸಹಜವಾಗಿ ಉದ್ಯೋಗ ಮಾಡುವವರ ವಿವಾಹ ವಯಸ್ಸಿನಲ್ಲಿ ಅಧಿಕ ಪ್ರಮಾಣವಾಗಿ ಬದಲಾವಣೆ ಆಗುತ್ತಿರುವುದನ್ನು ಈ ಕೋಷ್ಟಕದ ಮೂಲಕವಾಗಿ ಗಮನಿಸಬಹುದಾಗಿದೆ.

**ತಲೆಮಾರುಗಳಲ್ಲಿ ವಿವಾಹ ವಯಸ್ಸಿನಲ್ಲಿ ಬದಲಾವಣೆ**

ತಲೆಮಾರುಗಳವರಿನ ವಿವಾಹ ವಯಸ್ಸಿಗೂ ಹಾಗೂ ಇತ್ತೀಚಿನವರ ವಿವಾಹ ವಯಸ್ಸಿನಲ್ಲಿಯೂ ಬದಲಾವಣೆಯಾಗುತ್ತಿರುವುದು ಕಾಣಬಹುದಾಗಿದೆ. ಹೆಣ್ಣಿನ ಬದುಕು ಪರಿಪೂರ್ಣವಾಗಬೇಕಾದರೆ ಮೊದಲು ಮಡದಿ ಆಗಲೇಬೇಕು ಎಂಬ ಭಾವನೆ ನಮ್ಮ ಸಮಾಜದಲ್ಲಿ ಆಳವಾಗಿ ಬೇರೂರಿಬಿಟ್ಟಿದೆ. ಹೀಗಾಗಿಯೇ ಹೆಣ್ಣುಮಕ್ಕಳೆಲ್ಲರು ತಮ್ಮ ಮನಸ್ಸಿನಲ್ಲಿಯೇ ಮದುವೆಯಿಂದಲೇ ತಮ್ಮ ಬದುಕಿನ ಸಾರ್ಥಕತೆ ಎಂಬ ಭಾವನೆ, ನಂಬಿಕೆ ಬೆಳೆಸಿಕೊಂಡಿರುತ್ತಾರೆ.

**ಕೋಷ್ಟಕ ೩**

| ತಲೆಮಾರಿನವರ ವರ್ಷಗಳು | ಮಹಿಳೆಯರ ಸಂಖ್ಯೆ | ಸರಾಸರಿ ವಿವಾಹ ವಯಸ್ಸು |
|---|---|---|
| ೨೦-೩೦ | ೬೦ | ೧೮ |
| ೩೦-೪೦ | ೪೦ | ೨೧ |

ಈ ಕೋಷ್ಟಕವನ್ನು ಗಮನಿಸಿದಾಗ ತಿಳಿದುಬರುವ ಅಂಶಗಳೆಂದರೆ ೧೦೦ ಜನ ಮಾಹಿತಿದಾರರ ಪ್ರಕಾರ ೨೦-೩೦ ವರ್ಷಗಳು ಇರುವ ಮಾಹಿತಿದಾರರ ಹೇಳಿಕೆಯು ನೀಡಿರುವುದರ ಪ್ರಕಾರ ನೋಡಿದಾಗ ವಿವಾಹ ವಯಸ್ಸಿನಲ್ಲಿ ವ್ಯತ್ಯಾಸವಿರಬೇಕು ಎನ್ನುತಾರೆ. ೩೦-೪೦ ವರ್ಷಗಳು ಹೊಂದಿದವರ ಸರಾಸರಿ ವಿವಾಹ ವಯಸ್ಸು ಹೆಚ್ಚಿದೆ. ಒಟ್ಟಾರೆಯಾಗಿ ಈ ಮಾಹಿತಿದಾರರ ಅಭಿಪ್ರಾಯವೆಂದರೆ ತಾವು ಅನುಭವಿಸುವ ನೋವು, ಯಾತನೆಗಳು, ಸಮಸ್ಯೆಗಳು ಮುಂದಿನ ಯುವ ಪೀಳಿಗೆಯವರು ಅನುಭವಿಸಬಾರದು ಎಂದು ಹೇಳಿರುವುದು ಈ ಕೋಷ್ಟಕದಲ್ಲಿ ಕಂಡುಬರುವ ಸಂಗತಿಯಾಗಿದೆ.

ಇದುವರೆಗಿನ ಅಧ್ಯಯನಗಳು ಸಮಾಜ ಆಧುನಿಕಗೊಂಡಂತೆ ಮಹಿಳೆಯರ ವಿವಾಹ ವಯಸ್ಸಿನಲ್ಲಿ ಬದಲಾವಣೆ ಆಗುತ್ತಿದೆ ಎಂದು ಪ್ರತಿಪಾದಿಸುತ್ತವೆ. ಆದರೆ ಈ ಅಧ್ಯಯನದಲ್ಲಿ ಕಳೆದ ತಲೆಮಾರಿನಲ್ಲಿ ಹೇಳಿದ್ದ ವಿವಾಹ ವಯಸ್ಸು ಅಂದರೆ ೩೦-೪೦ ವರ್ಷದವರ ಸರಾಸರಿ ವಿವಾಹ ವಯಸ್ಸು ೨೧ ಇದ್ದು, ಈ

ತಲೆಮಾರಿನವರಲ್ಲಿ ಕಡಿಮೆಯಾಗಿದೆ ಎಂಬುದನ್ನು ಸೂಚಿಸುತ್ತದೆ. ಈ ಇಳಿಕೆಯು ಪಿತೃಪ್ರಧಾನ ಮೌಲ್ಯಗಳು ಸಮಾಜದಲ್ಲಿ ಹೆಚ್ಚು ಪ್ರಬಲಗೊಳ್ಳುತ್ತಿರುವುದನ್ನು ಸೂಚಿಸುತ್ತದೆ.

**ಜಾತಿ ಮತ್ತು ವಿವಾಹ ವಯಸ್ಸು ಸಂಬಂಧ**

ಭಾರತೀಯ ಸಮಾಜವು ಅನೇಕ ಜಾತಿ ಹಾಗೂ ಧರ್ಮಗಳನ್ನು ಹೊಂದಿರುವ ಸಮಾಜವಾಗಿದೆ. ಜಾತಿಪದ್ಧತಿಯು ಸಾಮಾಜಿಕ ಜೀವನದ ಅವಿಭಾಜ್ಯ ಅಂಗವಾಗಿದ್ದು, ಹಲವು ರೀತಿಯಲ್ಲಿ ತನ್ನ ಪ್ರಭಾವ ಸೂಚಿಸುತ್ತಿರುತ್ತದೆ. ಶ್ರೇಣಿಕೃತ ಸಮಾಜಕ್ಕೆ ಇದೊಂದು ಮೂಲಭೂತ ಕಾರಣವಾಗಿದೆ. ನಮ್ಮ ಅಧ್ಯಯನದಲ್ಲಿ ವಿವಿಧ ಜಾತಿ ಧರ್ಮಗಳಿಗೆ ಸೇರಿರುವ ಮಾಹಿತಿದಾರರಿದ್ದು ಅವರ ವಿವರಗಳನ್ನು ಜಾತಿಗನುಗುಣವಾಗಿ ವಿವಾಹ ವಯಸ್ಸಿನ ಸರಾಸರಿ ವಯಸ್ಸನ್ನು ಸಮರ್ಥನೆ ಮಾಡಲಾಗಿದೆ.

**ಕೋಷ್ಟಕ ೪**

| ಜಾತಿ ವಿವರಗಳು | ಮಹಿಳೆಯರ ಸಂಖ್ಯೆ | ಸರಾಸರಿ ವಿವಾಹ ವಯಸ್ಸು |
|---|---|---|
| ಪರಿಶಿಷ್ಟ ಜಾತಿ | ೧೬ | ೧೯ |
| ಪರಿಶಿಷ್ಟ ವರ್ಗ | ೨೮ | ೧೯ |
| ಹಿಂದುಳಿದ ವರ್ಗ | ೩೨ | ೨೧ |
| ಸಾಮಾನ್ಯ | ೨೪ | ೨೧ |

ಈ ಕೋಷ್ಟಕದಿಂದ ಮಹಿಳೆಯರು ನೀಡಿದ ಮಾಹಿತಿಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದಾಗ ತಿಳಿದುಬರುವ ಸಂಗತಿಗಳೆಂದರೆ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ವರ್ಗಗಳಲ್ಲಿ ವಿವಾಹ ವಯಸ್ಸಿನಲ್ಲಿ ವ್ಯತ್ಯಾಸ ಇಲ್ಲ ಹಾಗೂ ಆರ್ಥಿಕವಾಗಿ ಇವರು ಇನ್ನೂ ಸುಧಾರಿಸದೇ ಇರುವುದಾಗಿದೆ. ಹಿಂದುಳಿದ ವರ್ಗ ಮತ್ತು ಸಾಮಾನ್ಯವರ್ಗದಲ್ಲಿ ಸಮನಾಂತರವಾಗಿ ಚಲಿಸುತ್ತಿವೆ. ಕಾರಣವೆಂದರೆ ಆರ್ಥಿಕವಾಗಿ, ರಾಜಕೀಯ ವಾಗಿ ಮುಂದೆ ಬರುತ್ತಿದ್ದಾರೆ. ಪರಿಶಿಷ್ಟಜಾತಿ ಮತ್ತು ಪರಿಶಿಷ್ಟವರ್ಗ ಹಾಗೂ ಹಿಂದುಳಿದವರ್ಗ ಮತ್ತು ಸಾಮಾನ್ಯವರ್ಗಗಳ ನಡುವೆ ಮಾತ್ರ ವ್ಯತ್ಯಾಸ ಇರುವುದನ್ನು ಗಮನಿಸಬಹುದು. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಜನರು ಇನ್ನೂ ತಮಗಾಗಿ ಇರುವ ಹಲವಾರು ಯೋಜನೆಗಳ ಪ್ರಯೋಜನಗಳ ಬಗ್ಗೆ ಸರಿಯಾಗಿ ತಿಳಿದುಕೊಳ್ಳುತ್ತಿಲ್ಲ. ಹೀಗಾಗಿಯೇ ಇವರು ಹೆಚ್ಚು ಕಡಿಮೆ ಒಂದೇ ಸ್ತರದಲ್ಲಿ ಸಮಾನವಾಗಿರು ವುದನ್ನು ಕಾಣಬಹುದು.

**ವಿವಾಹ ವಯಸ್ಸಿನ ಕಾನೂನು ಕುರಿತು ಅರಿವು**

ಹೆಣ್ಣುಮಕ್ಕಳ ವಿವಾಹ ವಯಸ್ಸು ೧೮ ಮತ್ತು ಗಂಡುಮಕ್ಕಳ ವಿವಾಹ ವಯಸ್ಸು ೨೧ ಎನ್ನುವ ಕಾನೂನನ್ನು ಎಲ್ಲಾ ಮಹಿಳೆಯರು ಅರಿತಿದ್ದಾರೆ. ಆದರೂ ಕೂಡ ಇನ್ನೂ ಬಾಲ್ಯವಿವಾಹವು ಅಧಿಕ ಪ್ರಮಾಣದಲ್ಲಿ ನಡೆಯುತ್ತಲಿವೆ. ಏಕೆಂದರೆ ಜಾಸ್ತಿ ಹೆಣ್ಣುಮಕ್ಕಳಿಗೆ ವಿದ್ಯಾಭ್ಯಾಸ ಕೊಡಿಸಿದರೆ ಅವರಿಗೆ ತಕ್ಕ ಗಂಡು ಹುಡುಕುವುದು ಹಾಗೂ ವರದಕ್ಷಿಣೆ ಹೆಚ್ಚಿಗೆ ಕೊಡಬೇಕು ಇದು ಬಹಳ ಕಷ್ಟಕರವೆಂದು ಪಾಲಕರು ಅಂಜುತ್ತಾ ಕೊಟ್ಟ ಹೆಣ್ಣು ಕುಲದ ಹೊರಗೆ ಎನ್ನುವ ನಂಬಿಕೆಯಿಂದ ಸಂಪೂರ್ಣ ಹೊರಬರಲು ಯಾರಿಂದಲೂ ಆಗುತ್ತಿಲ್ಲ.

**ಕೋಷ್ಟಕ ೫೫**

| ಒಟ್ಟು ಮಹಿಳೆಯರು | ಅರಿವಿದೆ | ಅರಿವಿಲ್ಲ |
|---|---|---|
| ೧೦೦ | ೧೦೦ | ೦೦ |

ಈ ಕೋಷ್ಟಕದಲ್ಲಿ ಅತಿಮುಖ್ಯವಾಗಿ ಕಂಡುಬರುವ ಅಂಶವೆಂದರೆ ಎಲ್ಲಾ ಮಾಹಿತಿದಾರರು ನೀಡಿರುವ ಮಹಿಳೆಯರೆಲ್ಲರೂ ಸ್ವಲ್ಪಮಟ್ಟಿಗಾದರೂ ವಿದ್ಯಾಭ್ಯಾಸ ಪಡೆದುಕೊಂಡಿರುವುದರಿಂದಾಗಿ ಸಮೂಹ ಮಾಧ್ಯಮಗಳ ಮೂಲಕ ಪತ್ರಿಕೆಗಳನ್ನು ಓದುವುದರ ಮುಖಾಂತರ ತಮ್ಮೆಲ್ಲರಿಗೂ ಕಾನೂನಿನ ಅರಿವಿದೆ ಎಂದು ಹೇಳಿದ್ದಾರೆ. ಕಾನೂನಿನ ಅರಿವಿಲ್ಲ ಎನ್ನುವವರು ಯಾರೊಬ್ಬರೂ ಈ ಅಧ್ಯಯನದಲ್ಲಿ ಕಂಡು ಬಂದಿರುವುದಿಲ್ಲ. ಕಾನೂನಿನ ಅರಿವಿದ್ದ ಎಷ್ಟೋ ಮಹಿಳೆಯರು ಕೂಡ ಕೆಲವೊಂದು ಅನಿವಾರ್ಯವಾದ ಕಾರಣಗಳಿಂದಾಗಿ ಈ ಕಾನೂನನ್ನು ತಿಳಿದಿದ್ದರೂ ಅದರಿಂದ ತಮಗೆ ದೂರವಾಗಲು ಸಾಧ್ಯವಿಲ್ಲವೆನ್ನುತ್ತಾರೆ.

**ಹೆಣ್ಣುಮಕ್ಕಳ ವಿವಾಹ ವಯಸ್ಸಿಗೆ ಕಾರಣ**

ಹೆಣ್ಣುಮಕ್ಕಳ ವಿವಾಹ ವಯಸ್ಸನ್ನು ನಿರ್ಧರಿಸುವ ಮೂಲ ಕಾರಣಗಳೆಂದರೆ ಕೆಲವು ಸಡಿಲ ನೀತಿ ನಿಯಮಗಳು ಹಾಗೂ ಅಂಧಶ್ರದ್ಧೆಗಳು. ಭಾರತೀಯ ಮಹಿಳೆಯರ ಇಂದಿನ ಪರಿಸ್ಥಿತಿ ತೆಗೆದುಕೊಂಡರೆ ಎಲ್ಲರಲ್ಲಿಯೂ ನಡೆ-ನುಡಿ, ವೇಷ-ಭೂಷಣ ಊಟೋಪಚಾರ ಹೀಗೆ ಎಲ್ಲ ರೀತಿಯಲ್ಲಿಯೂ ಪರಿವರ್ತನೆಯಾಗುತ್ತಿರುವುದು ನೋಡಬಹುದು. ಬೇಗ ವಿವಾಹ ಮಾಡುವುದರಿಂದ ಆರೋಗ್ಯದ ಮೇಲೆ ಬೀರುವ ಪರಿಣಾಮ, ತೊಂದರೆ, ಸಮಸ್ಯೆಗಳತ್ತ ಎಚ್ಚರಿಕೆಯನ್ನು ಬೆಳೆಸಿಕೊಳ್ಳುತ್ತಿದ್ದಾರೆ.

**ಕೋಷ್ಟಕ ೬**

| ಬಾಲ್ಯವಿವಾಹಕ್ಕೆ ಕಾರಣಗಳು | ಮಹಿಳೆಯರ ಸಂಖ್ಯೆ |
| --- | --- |
| ರೂಢಿ ಸಂಪ್ರದಾಯ | ೪೮ |
| ಹಿರಿಯರ ಆಸೆ ಪೂರೈಕೆಗಾಗಿ | ೪೦ |
| ಬಾಲವಿವಾಹವೇ ಸೂಕ್ತವಾದುದು | ೧೨ |

ಈ ಕೋಷ್ಟಕದಿಂದ ಮಹಿಳೆಯರು ನೀಡಿರುವ ಮಾಹಿತಿಯನ್ನು ಸೂಕ್ಷ್ಮವಾಗಿ ಸರಾಸರಿ ವಿವಾಹ ವಯಸ್ಸಿನ ಆಧಾರಕ್ಕನುಗುಣವಾಗಿ ವಿಶ್ಲೇಶಿಸಿದಾಗ ತಿಳಿದುಬರುವ ಸಂಗತಿಗಳೆಂದರೆ ೧೦೦ ಮಹಿಳೆಯರಲ್ಲಿ ೫೮ ಜನರು ಇದು ರೂಢಿಗತ ಸಂಪ್ರದಾಯವಾಗಿರುವ ಪದ್ಧತಿಯೆಂದು ೪೦ ಜನ ಮಹಿಳೆಯರು ಹಿರಿಯರ ಆಸೆ ಪೂರೈಕೆಗಾಗಿ ಎಂದವರ ಸರಾಸರಿ ವಿವಾಹ ವಯಸ್ಸು ೨೦. ೧೨ ಜನ ಬಾಲ್ಯವಿವಾಹವಾದರೆ ಸೂಕ್ತವಾದುದು ಎನ್ನುವವರ ಸರಾಸರಿ ವಿವಾಹ ವಯಸ್ಸು ೧೭ ಆಗಿದೆ. ಒಟ್ಟಾರೆಯಾಗಿ ಈ ಪದ್ಧತಿಯು ಅನಿಷ್ಟ ಪದ್ಧತಿಯಾಗಿದೆ. ಇದು ಒಳ್ಳೆಯದಲ್ಲ. ಏಕೆಂದರೆ ಆರೋಗ್ಯದ ಅರಿವು, ಕುಟುಂಬದ ಹೊರೆ ಹೋರುವ ಸಾಮರ್ಥ್ಯ ಮಹಿಳೆಯರಿಗೆ ಬಂದಿರುವುದಿಲ್ಲ. ಮಾನಸಿಕ ಹಾಗೂ ಬೌದ್ಧಿಕವಾಗಿ ಮಹಿಳೆಯರು ಬೆಳೆದಾಗಲೆ ಮದುವೆ ಮಾಡುವುದು ಉತ್ತಮವೆನ್ನುತ್ತಾರೆ. ಆದರೂ ಸಹ ಸಂಪೂರ್ಣವಾಗಿ ಮೂಢನಂಬಿಕೆ, ಸಂಪ್ರದಾಯಬದ್ಧ ಕುಟುಂಬಗಳಲ್ಲಿ ಈ ಚೌಕಟ್ಟನ್ನು ಯಾರು ಮೀರಲು ಸಾಧ್ಯವಿಲ್ಲ ಎನ್ನುತ್ತಾರೆ. ಪ್ರಬುದ್ಧತೆ ಬಂದ ಮೇಲೆ ನಮ್ಮ ಮಕ್ಕಳು ತಾವು ತೋರಿಸಿದ ಹುಡುಗನನ್ನು ನಿರಾಕರಿಸಬಹುದು ಎಂಬ ಭಯದಿಂದಾಗಿ ತಂದೆ ತಾಯಿಗಳು ಬೇಗ ಮದುವೆ ಮಾಡುತ್ತಾರೆ. ತಮ್ಮ ಜವಾಬ್ದಾರಿ ಮುಗಿಯಿತು ಎಂದು ಸಂತೋಷಗೊಂಡರೂ ಈ ಪದ್ಧತಿಯೂ ನಿವಾರಣೆಯಾಗುವವರೆಗೆ ಮಹಿಳೆಯರ ಸಮಸ್ಯೆಗಳ ಸುಳಿಯಿಂದ ಹೊರಬರಲು ಸಾಧ್ಯವಿಲ್ಲ.

ಮೇಲೆ ಗಮನಿಸಲಾಗಿರುವ ಎಲ್ಲ ವಿಚಾರಗಳು ಹೆಣ್ಣುಮಕ್ಕಳ ವಿವಾಹ ವಯಸ್ಸಿನ ಮೇಲೆ ನೇರವಾದ ಹತೋಟಿ ಹೊಂದಿರುವ ಅಂಶಗಳಾಗಿದ್ದರೂ ಇವುಗಳಲ್ಲಿ ಯಾವೊಂದು ತನ್ನಿಂದ ತಾನೇ ಸಂಪೂರ್ಣ ಹಿಡಿತವನ್ನು ಹೊಂದಿರುವಂತೆ ಕಾಣುವುದಿಲ್ಲ. ಬದಲಿಗೆ ಈ ಎಲ್ಲ ಅಂಶಗಳ ಸಹಯೋಗದಲ್ಲಿ ಹೆಣ್ಣು ಮಕ್ಕಳ ವಿವಾಹ ವಯಸ್ಸು ನಿರ್ಧಾರವಾಗುತ್ತದೆ. ಆದ್ದರಿಂದ ಹೆಚ್ಚು ಮಕ್ಕಳ ಸಮಸ್ಯೆ ಹಾಗೂ ಪರಿಸ್ಥಿತಿಗಳನ್ನು ಸಮಗ್ರವಾಗಿ ಪರಿಶೀಲಿಸುವ ಹಾಗೂ ಸಮಗ್ರ ನೆಲೆಯಲ್ಲಿಯೇ ಪರಿಹಾರಕ್ಕಾಗಿ ಯತ್ನಿಸುವುದು ಹೆಚ್ಚು ಉಪಯುಕ್ತವಾಗುತ್ತದೆ.

ಬಾಲ್ಯವಿವಾಹವನ್ನು ತಡೆಗಟ್ಟಲು ಅನೇಕ ಸಮಾಜ ಸುಧಾರಕರು ಹೋರಾಡಿದರು. ಈ ಪದ್ಧತಿಯ ನಿಷೇಧ ಕಾಯಿದೆಯನ್ನು ಜಾರಿಗೆ ತಂದರು ಕೂಡ ಇದು ಇಂದಿಗೂ ಅನೇಕ ಸಮುದಾಯಗಳಲ್ಲಿ, ಹೆಣ್ಣುಮಕ್ಕಳನ್ನು ಅತೀ ಚಿಕ್ಕವಯಸ್ಸಿನಲ್ಲಿ ವಿವಾಹ ಮಾಡುವುದು ಪ್ರತಿಷ್ಠೆಯ ಸಂಕೇತವೆಂದು ಪರಿಗಣಿಸುತ್ತಾರೆ. ಉತ್ತರ ಭಾರತದ ಹಲವು ರಾಜ್ಯಗಳಂತೂ ಈ ಪದ್ಧತಿಯೂ ಸರ್ವಸಾಮಾನ್ಯವಾಗಿದೆ. ಸಾಮಾಜಿಕ ಬಾಲ್ಯವಿವಾಹಗಳು ಇಂದಿಗೂ ಭಾರತದ ಹಲವೆಡೆಗಳಲ್ಲಿ ನಡೆಯುತ್ತಿರುವ ಕರ್ನಾಟಕವೂ ಸೇರಿದಂತೆ ಅನೇಕ ವರದಿಗಳಿದ್ದು, ಈ ಸಮಾರಂಭದಲ್ಲಿ ರಾಜ್ಯದ ಮಂತ್ರಿಗಳೂ ಭಾಗವಹಿಸಿರುವ ವರದಿಗಳಿವೆ. ಅಲ್ಲಿ ನೆರೆದಿರುವ ಅರಕ್ಷಕರು, ಮಂತ್ರಿಗಳ ಸುರಕ್ಷತಾ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಾರೆಯೇ ಹೊರತು ತಮ್ಮೆದುರಿಗೆ ನಡೆಯುತ್ತಿರುವ ಕಾನೂನು ಉಲ್ಲಂಘನೆಗೆ ಅವರ ಯಾವುದೇ ಪ್ರತಿಕ್ರಿಯೆಯೇನೂ ಇಲ್ಲ. ಸಾಮಾಜಿಕ ಬದಲಾವಣೆಗಳು ನಮ್ಮ ಸಮಾಜದಲ್ಲಿ ಉಂಟಾಗಿದ್ದರೂ ಇಂದಿಗೂ ಹೆಣ್ಣುಮಕ್ಕಳನ್ನೂ ಅಪ್ರಾಪ್ತ ವಯಸ್ಸಿನಲ್ಲಿಯೇ ವಿವಾಹ ಮಾಡುವ ಪ್ರವೃತ್ತಿಯೇನೂ ನಶಿಸಿ ಹೋಗುತ್ತಿಲ್ಲ. ಅದರಲ್ಲೂ ಗ್ರಾಮೀಣ ಪ್ರದೇಶಗಳಲ್ಲಂತೂ ಹೆಣ್ಣು ತನ್ನ ೧೮ನೇ ವಯಸ್ಸನ್ನು ತಲುಪುವ ಮೊದಲೇ ವಿವಾಹವೆಂಬ ಬಂಧನದೊಳಗೆ ತಳಲ್ಪಟ್ಟು, ತನ್ನ ಜೀವನವಿಡಿ ಅದರ ಪರಿಣಾಮಗಳನ್ನು ಎದುರಿಸಬೇಕಾಗಿ ಬರುವುದು ಇಂದಿಗೂ ಸಾಮಾನ್ಯ. ಅಪ್ರಾಪ್ತ ವಯಸ್ಸಿನಲ್ಲೆ ವಿವಾಹವಾಗುವ ಹೆಣ್ಣುಮಕ್ಕಳು ತಮ್ಮ ಎಳೆಯ ವಯಸ್ಸಿನಲ್ಲಿಯೇ ತಾಯ್ತನದ ಜವಾಬ್ದಾರಿಯನ್ನು ಪದೇ ಪದೇ ಹೊರಬೇಕಾಗುತ್ತದೆ. ಇದರಿಂದ ಅವರ ಆರೋಗ್ಯದ ಮೇಲೆ ಹಲವಾರು ರೀತಿಯ ದುಷ್ಪರಿಣಾಮಗಳು ಉಂಟಾಗಿ, ಅಂದರೆ ರಕ್ತಹೀನತೆ, ಶಾರೀರಿಕ ದೌರ್ಬಲ್ಯ ಇವೇ ಮುಂತಾದ ತೊಂದರೆಗಳಿಗೆ ಅವರು ಬಲಿಯಾಗುತ್ತಾರೆ. ಪದೇ ಪದೇ ಗರ್ಭಧಾರಣೆ, ಮಕ್ಕಳ ಪಾಲನೆ, ಪೋಷಣೆಯ ಜವಾಬ್ದಾರಿ ಹೊರುವುದು, ಮನೆಯಲ್ಲಿ ಅವಿರತ ದುಡಿಮೆ ಇದೊಂದು ವಿಷವರ್ತುಲ. ಈ ರೀತಿಯ ವಿಷವರ್ತುಲದೊಳಗೆ ಒಮ್ಮೆ ಸಿಲುಕಿಕೊಂಡರೆ ಅನೇಕರು ತಮ್ಮ ಹೆಣ್ಣುಮಕ್ಕಳ ವಿಚಾರಕ್ಕೂ ಇದೇ ತಪ್ಪನ್ನು ಮಾಡುತ್ತಿರುವುದು ವಿಷಾದನೀಯವಾಗಿದೆ. ಶರವೇಗದಲ್ಲಿ ಉಲ್ಬಣಿಸುತ್ತಿರುವ ಭಾರತದ ಜನಸಂಖ್ಯೆಗೂ ಸಣ್ಣ ವಯಸ್ಸಿನ ವಿವಾಹಗಳು ಮುಖ್ಯ ಕಾರಣಗಳಲ್ಲೊಂದು ಎಂದೇನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಸಣ್ಣ ವಯಸ್ಸಿನಲ್ಲೆ ಹೆಣ್ಣುಮಕ್ಕಳಿಗೆ ವಿವಾಹ ಮಾಡುವುದರಿಂದ ಅವರ ಭವಿಷ್ಯತ್ತಿನ ಅಭಿವೃದ್ಧಿಗೆ ಎಲ್ಲ ವಿಧದಲ್ಲಿಯೂ ಅಡ್ಡಿಯುಂಟಾಗುತ್ತದೆ. ಆಡಿ ಓದಿ ನಲಿದಾಡಬೇಕಾಗಿರುವ ಮಕ್ಕಳನ್ನು ಬೆಳೆಯುವ ಹಂತದಲ್ಲಿಯೆ ಸಂಸಾರವೆಂಬ ನೋಗಕ್ಕೆ ಕಟ್ಟಿ ಹಾಕಿ, ಅವರನ್ನು ಶಿಕ್ಷಣದಿಂದ ವಂಚಿಸಿ, ಅವರ ಇಡೀ ಬದುಕನ್ನೆ ಅಜ್ಞಾನದ ಅಂಧಕಾರ ಕೋಪದಲ್ಲಿ ಅದ್ದುವುದರಿಂದ ಆರೋಗ್ಯವಂತರಾದ ಸ್ತ್ರೀ ಸಂತತಿಯ ಸೃಷ್ಟಿಗೆ ಒಂದು ತಡೆಗಲ್ಲನ್ನು ಒಡ್ಡಿದಂತಾಗುತ್ತದೆ.

ಬಡತನದಲ್ಲಿ ಇರುವಂಥ ಕುಟುಂಬಗಳಲ್ಲಂತೂ ದೈಹಿಕ, ಮಾನಸಿಕ ತೊಂದರೆಗಳೊಡನೆ ಅಪೌಷ್ಟಿಕತೆ, ಅನಾರೋಗ್ಯ ಹಾಗೂ ಅಜ್ಞಾನಗಳೆಂಬ ಸಮಸ್ಯೆಗಳೂ ಸೇರಿದಾಗ ಆ ಹೆಣ್ಣುಮಕ್ಕಳಿಗೆ ಎಂಥ ಭವಿಷ್ಯವಿದೆ ಎಂಬುದನ್ನು ನಾವುಗಳೂ ಊಹೆ ಮಾಡಬಹುದು. ಕೇರಳ ರಾಜ್ಯವನ್ನು ಹೊರತುಪಡಿಸಿದರೆ, ದೇಶದ ಎಲ್ಲೆಡೆ ವಿವಾಹದ ವಯಸ್ಸಿನಲ್ಲಿ ಗಮನಾರ್ಹವಾದ ಏರಿಕೆ ಆಗಿಲ್ಲದಿರುವುದರಿಂದಾಗಿಯೇ ಅಪ್ರಾಪ್ತ ವಯಸ್ಸಿನ ವಿವಾಹಗಲು ಸೃಷ್ಟಿಸುವ ಸಮಸ್ಯೆಗಳು ಇಂದು ದೇಶದಾದ್ಯಂತ ಮಹಿಳಾ ಅಭಿವೃದ್ಧಿಗೆ ಒಂದು ಬೃಹತ್ ಸವಾಲನ್ನೊಡ್ಡಿವೆ. ಈ ವಿಷಯದಲ್ಲಂತೂ ಕಾನೂನು ಪಾಲನಾ ವ್ಯವಸ್ಥೆ ಸಂಪೂರ್ಣವಾಗಿ ನಿಷ್ಕ್ರೀಯವಾಗಿರುವುದರಿಂದ ಪರಿಸ್ಥಿತಿ ಮತ್ತಷ್ಟು ಗಂಭೀರವಾಗಿದೆ. ಕಾನೂನು ಉಲ್ಲಂಘಿಸಿದವರಿಗೆ ಶಿಕ್ಷೆ ಹಾಗೂ ಜನಜಾಗೃತಿ ಮೂಡಿಸುವ ಕಾರ್ಯಕ್ರಮಗಳು ಸಮಾರೋಪಾದಿಯಲ್ಲಿ ಆದಾಗ ಮಾತ್ರ ಈ ಸಮಸ್ಯೆಗೆ ಪರಿಹಾರ ಸಾಧ್ಯವಾಗುವುದು.

ಇಂದು ಜಗತ್ತು ಎಷ್ಟೇ ಮುಂದುವರಿದರೂ ಸಹ ನಮ್ಮ ಹಳ್ಳಿಗಳನ್ನೂ ಸುಧಾರಿಸುತ್ತಿಲ್ಲ. ಹಳ್ಳಿಗಳಲ್ಲಿ ಇವತ್ತಿಗೂ ಬಾಲ್ಯವಿವಾಹಗಳು ನಡೆಯುತ್ತಿವೆ. ಇದಕ್ಕೆಲ್ಲ ಮುಖ್ಯ ಕಾರಣ ನಮ್ಮ ಜನರ ಅಜ್ಞಾನ, ಅನಕ್ಷರತೆ, ಅದಷ್ಟು ಹಳ್ಳಿಯ ಹೆಣ್ಣುಮಕ್ಕಳು ವಿದ್ಯಾವಂತರಾಗುವತ್ತ, ಪ್ರಜ್ಞಾವಂತರಾಗುವತ್ತ ಹೆಚ್ಚು ಗಮನಹರಿಸಬೇಕು. ಹೆಣ್ಣುಮಕ್ಕಳು ವಿದ್ಯಾವಂತರಾದರೆ ಅವರ ಸಮಸ್ಯೆಗಳು ಅರ್ಧ ಕಡಿಮೆಯಾದಂತೆಯೇ ಸರಿ. ಹಳ್ಳಿಗಳಲ್ಲಿ ಮನೆಮನೆಗೆ ಹೋಗಿ ತಿಳುವಳಿಕೆ ನೀಡುವ ಕಳಕಳಿಯಿಂದ ಕೆಲಸ ಮಾಡುವ ಗ್ರಾಮ ಸೇವಿಕೆಯರು ಇರಬೇಕು. ಹೀಗೆ ಎಳೆತನದಿಂದ ತಿಳುವಳಿಕೆ ನೀಡಿ ವಿದ್ಯಾಭ್ಯಾಸ ಕೊಟ್ಟರೆ ಅವರುಗಳೇ ಈ ಬಾಲ್ಯವಿವಾಹವನ್ನು ಪ್ರತಿಭಟಿಸುವ ಶಕ್ತಿಯನ್ನು ಬೆಳೆಸಿಕೊಳ್ಳುತ್ತಾರೆ.

ಸಮಾಜವೊಂದರಲ್ಲಿ ಹೆಣ್ಣಿನ ಸ್ಥಾನಮಾನವನ್ನು ನಿರ್ಧರಿಸುವ ಪ್ರಮುಖ ಸಂಸ್ಥೆ ಮದುವೆ. ಪಿತೃಪ್ರಧಾನ ಪದ್ಧತಿಯಲ್ಲಿ ವಿವಾಹ ಎಷ್ಟು ಮುಖ್ಯವಾಗಿರುವುದೆಂದರೆ ವಿವಾಹಿತ ಪುರುಷ ಪಿತೃ ಧರ್ಮವನ್ನು ಮುಂದುವರಿಸಿಕೊಂಡು ಹೋಗುವಲ್ಲಿ ಅರ್ಹನಾಗುತ್ತಾನೆ ಎಂದ ಮೇಲೆ ಹಣ್ಣಿಗೆ ವಿವಾಹವೆಂದರೆ ತವರಿನಿಂದ ಪತಿಗೃಹಕ್ಕೆ ಸಾಗಿ ಬರುವ ಒಂದು ಕ್ರಿಯೆ. ಸ್ವಂತ ನಿರ್ಧಾರ ಅಧಿಕಾರದ ಮೇಲೆ ಆಕೆ ಯಾವ ರೀತಿಯ ಬೆಲೆಯೂ ಇಲ್ಲ. ಪಾತ್ರವೂ ಇಲ್ಲ. ಮುಂದೆ ಆಗಲಿರುವ ಸಂತಾನೋತ್ಪತ್ತಿ, ಅದರ ಮನೆ ಪಾಲನೆ ಎಲ್ಲವೂ ಆಕೆ ವಿವಾಹವಾಗಿ ಬಂದ ಕುಟುಂಬಕ್ಕೆ ಸೇರುವುದರಿಂದ ಮಗುವಿನ ಜನನ ಧರ್ಮ ಸಮ್ಮತವಾಗಿರಬೇಕೆಂದು ಪಿತೃಪ್ರಧಾನ ಪದ್ಧತಿ ಅಗ್ರಹಪೂರ್ವಕವಾಗಿ ಬಯಸುತ್ತದೆ. ಇಲ್ಲಿ ಮಗುವಿನ ತಂದೆ ಯಾರೆಂಬ ಪ್ರಶ್ನೆ ಬಲು ಮುಖ್ಯದ್ದು, ಯಾಕೆಂದರೆ ಆ ಮಗು ಮುಂದೆ ತಮ್ಮ ಮನೆತನದ ಕೀರ್ತಿ ಗೌರವ ಹಾಗೂ ಆಸ್ತಿಗಳಿಗೆ ನ್ಯಾಯಬದ್ಧ ವಾರಸುದಾರನಾಗಲಿರುವವನು. ಹೀಗಾಗಿ ಹೆಣ್ಣಿನ ಲೈಂಗಿಕ ಸಂಬಂಧವೆಂದರೆ ಹದ್ದುಬಸ್ತಿಗೊಳಪಡಲೇ ಬೇಕಾದ ವಿಷಯವಾಗಿದೆ.

ಹೆಣ್ಣು ವಿವಾಹ ಪೂರ್ವದಲ್ಲಿಯೂ, ಅಂದರೆ ತವರಿನಲ್ಲಿಯೂ ಆಕೆ ಒಂದು ಅಂಕೆಯೊಳಗೆ ಬೆಳೆದು ಬರುತ್ತಾಳಷ್ಟೆ ಎಳೆವಯಸ್ಸಿನಲ್ಲಿಯೆ ಹಲವೊಮ್ಮೆ ಇನ್ನೂ ಋತುಮತಿಯರಾಗುವ ಮೊದಲೆ ಅವಳಿಗೆ ಮದುವೆ ಮಾಡಿ ಬಿಡುವುದು ಇನ್ನೊಂದು ಬಗೆಯಲ್ಲಿ ಅವಳು ಪಾವಿತ್ರ್ಯವನ್ನು ಕಾಪಾಡಿಕೊಳ್ಳುವ ಮಾರ್ಗ ಎಂದು ತಿಳಿದಿರುವ ಜನರು ವಿವಾಹದ ಕನಿಷ್ಠ ವಯಸ್ಸನ್ನು ಕಾನೂನು ನಿಗಧಿಗೊಳಿಸಿದ್ದರೂ ಇವತ್ತಿಗೂ ಭಾರತದಲ್ಲಿ ಬಾಲ್ಯವಿವಾಹದ ಸಮಸ್ಯೆ ಪರಿಹಾರವಾಗದೆ ಉಳಿದಿದೆ. ಆದಿಕಾಲದಿಂದ ಹರಿದುಬಂದ ಘನ ಪರಂಪರೆ ಎದುರು ಕಾನೂನು ವಿಧಿಸುವ ಪ್ರತಿಬಂಧಕಗಳು ಎಲ್ಲಿ! ಕೇವಲ ಒಂದು ಶತಮಾನದ ಕೆಳಗೆ ಬಾಲ್ಯವಿವಾಹವೆಂಬುದು ಅತಿ ಸಾಮಾನ್ಯವಾಗಿದ್ದ ಪದ್ಧತಿಯಾಗಿತ್ತು. ಈಗ ಎಷ್ಟೋ ಪಾಲು ಅಳಿಸಿ ಹೋಗಿದೆ. ರಾಷ್ಟ್ರೀಯ ಜನಗಣನೆಯ ೧೯೭೧ರ ಒಂದು ವರದಿಯ ಪ್ರಕಾರ ಇಂಡಿಯಾದ ಗ್ರಾಮೀಣ ಪ್ರದೇಶದಲ್ಲಿ ೧೦ ೧೪ ವರ್ಷ ಪ್ರಾಯದ ವಿವಾಹಿತ ಹುಡುಗಿಯರು ೧೩.೬ ಇದ್ದರು ಮದುವೆಯಾಗದ ೨೫ ೨೭ ವರ್ಷ ಪ್ರಾಯದ ಯುವತಿಯರು ೧ ಕ್ಕೂ ಕಡಿಮೆ ಪಟ್ಟಣಗಳಲ್ಲಿ ಈ ಸಂಖ್ಯೆ ೨ ರಷ್ಟಿದೆ. ೨೧ನೇ ಶತಮಾನದಲ್ಲಿ ಸಮಾಜ ಜೀವನದ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಕಾನೂನಿನ ಕ್ಷೇತ್ರಗಳಲ್ಲಿ ತರಲಾದ ಬದಲಾವಣೆಗಳು ಮಹಿಳೆಯರ ಸ್ಥಾನಮಾನದಲ್ಲಿ ಯಾವುದೇ ಬದಲಾವಣೆಗಳನ್ನು ತರಲಿಲ್ಲ ಏಕೆ ಎಂಬುದು ನಿಜವಾಗಿಯೂ ಯೋಚಿಸಬೇಕಾಗಿರುವ ಸಂಗತಿ. ಇದರಿಂದ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಅದೇನೆಂದರೆ ಕೇವಲ ಕಾನೂನುಗಳಾಗಲೀ, ಕಾರ್ಯನೀತಿಗಳಾಗಲೀ, ಸಮಾಜದಲ್ಲಿ ಅಪೇಕ್ಷಿತ ಬದಲಾವಣೆಯನ್ನು ತರಲು ಸಾಧ್ಯವಿಲ್ಲ. ಮಹಿಳೆಯರಲ್ಲಿ ಈ ಬಗ್ಗೆ ಜಾಗೃತಿ ಮೂಡಿಸಬೇಕು ಹಾಗೂ ಬದಲಾವಣೆ ತರಬೇಕೆಂಬ ಸಾಮಾಜಿಕ ಕಳಕಳಿ ಸಂಕಲ್ಪವಿರಬೇಕು. ಆಗ ಮಾತ್ರ ಮಹಿಳೆಯರ ಸ್ಥಿತಿ ಸುಧಾರಿಸಲು ಸಾಧ್ಯ. ಜನರಲ್ಲಿ ಮನಃಪರಿವರ್ತನೆಯಾಗದೆ, ಇಂತಹ ಪಿಡುಗುಗಳನ್ನು ಕಾನೂನು ಬಲದಂದಿಲೇ ಚಿವುಟುವುದು ತೀರಾ ಕಷ್ಟ. ಹೀಗಾಗಿ ಬಾಲ್ಯವಿವಾಹದ ವಿರುದ್ಧದ ಪ್ರಚಾರ, ಆಂದೋಲನದ ಮಾದರಿಯಲ್ಲಿ ನಡೆಯಬೇಕು. ಈ ದಿಸೆಯಲ್ಲಿ ಸುಮೂಹ ಮಾಧ್ಯಮಗಳನ್ನು ಸಮರ್ಥವಾಗಿ ಬಳಸಿಕೊಳ್ಳಬೇಕು. ಜೊತೆಗೆ ಜಿಲ್ಲಾ, ತಾಲ್ಲೂಕು ಹಾಗೂ ಗ್ರಾಮಮಟ್ಟದ ರಾಜಕಾರಣಿಗಳು ಹಾಗೂ ಅಧಿಕಾರಿಗಳು ಈ ದಿಸೆಯಲ್ಲಿ ಸಂವೇದನಶೀಲರಾಗಿಸುವಂತ ಕ್ರಮಗಳನ್ನು ಹಮ್ಮಿಕೊಳ್ಳಬೇಕು.

ಬಾಲ್ಯವಿವಾಹಕ್ಕೆ ಪ್ರಮುಖ ಕಾರಣ ಎಂದರೆ ಸಂಪ್ರದಾಯ ಹಾಗೂ ಮೂಢನಂಬಿಕೆಗಳು ಈ ದಿಸೆಯಲ್ಲಿ ಜನರಲ್ಲಿ ಜಾಗೃತಿ ಮೂಡಿಸುವುದು ತುಂಬಾ ಮುಖ್ಯ. ಬಾಲವಿವಾಹದಿಂದಾಗುವ ದುಷ್ಪರಿಣಾಮಗಳನ್ನು ಜನರಿಗೆ ಮನವರಿಕೆ ಮಾಡುವುದು ಇಲ್ಲಿ ಅಗತ್ಯವಾಗಿರುತ್ತದೆ. ಬಾಲ್ಯವಿವಾಹದಿಂದ ವಿಶೇಷವಾಗಿ ಹೆಣ್ಣುಮಕ್ಕಳ ಆರೋಗ್ಯದ ಮೇಲಾಗುವ ಪರಿಣಾಮ ಹಾಗೂ ಮುಂದೆ ಹುಟ್ಟುವ ಮಕ್ಕಳ ಮೇಲೆ ಉಂಟಾಗಬಹುದಾದ ಪರಿಣಾಮಗಳ ಬಗ್ಗೆ ಜನರಲ್ಲಿ ಅರಿವು ಮೂಡಿಸಲು ತೀವ್ರ ಕ್ರಮಗಳನ್ನು ಕೈಗೊಳ್ಳಬೇಕು.

## ಆಧಾರ ಗ್ರಂಥಗಳು

೧. ಅನಂತರಾಮಯ್ಯ ಆರ್.ಎಲ್.(ಅನು), **ಭಾರತೀಯ ಸಮಾಜ,** ಮೂಲ : ಶ್ಯಾಮಚರಣದುಬೆ, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ ನವದೆಹಲಿ, ೧೯೯೪

೨. ಅನಂತಕೃಷ್ಣ ಎಂ. ಹೆಬ್ಬಾರ್(ಅನು), **ಭಾರತ ಸಂಘ ಜೀವನದಿಂದ ಗುಲಾಮಗಿರಿಗೆ,** ಮೂಲ:ಶ್ರೀಪಾದ ಅಮೃತ, ಅಭಿವ್ಯಕ್ತ ಪ್ರಕಾಶನ, ಮಂಗಳೂರು, ೧೯೮೩

೩. ಇಂದಿರಾ ಆರ್., **ಮಹಿಳೆ ಸಮಾಜ ಮತ್ತು ಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪. ಇಂದಿರಾ ಆರ್., **ಮಹಿಳೆ ಮತ್ತು ಕೌಟುಂಬಿಕ ಹಿಂಸೆ,** ಶ್ರೀಮತಿ ಯಶೋಧಾರಾಗೌ ಟ್ರಸ್ಟ್, ಜಯಲಕ್ಷ್ಮಿಪುರಂ, ಮೈಸೂರು, ೧೯೯೯

೫. ಉಷಾ ಎಂ., **ಸಂಸ್ಕೃತಿ ಚಿಂತನೆ ಮತ್ತು ಭಾರತೀಯ ಸ್ತ್ರೀವಾದ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೬. ಗಾಂಧೀ ಗ್ರಂಥಮಾಲೆ, **ಮಹಿಳೆಯರು,** ಎಂ.ಕೆ.ಗಾಂಧಿ ಬೃಂದಾವನ ಟ್ರಸ್ಟ್, ಬೆಂಗಳೂರು, ೧೯೬೭

೭. ಗೀತಾಕೃಷ್ಣಮೂರ್ತಿ, **ವಿವಾಹ ಕಾನೂನು,** ಲೋಕಶಿಕ್ಷಣ ನಿರ್ದೇಶನಾಲಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

೮. ಚಂದ್ರಶೇಖರ ಬಿ.ದಾಮ್ಲೆ, **ಭಾರತೀಯ ಸಾಮಾಜಿಕ ಅಧ್ಯಯನ,** ೧೯೯೮

೯. ಚೆನ್ನಕ್ಕ ಎಲಿಗಾರ, **ಶಾಸನಗಳಲ್ಲಿ ಕರ್ನಾಟಕ ಸ್ತ್ರೀ ಸಮಾಜ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೦

೧೦. ಜಯಮ್ಮ ಎಚ್.ಕರಿಯಣ್ಣ, **ಹೆಣ್ಣಿನ ಸ್ಥಾನಮಾನ ಒಂದು ಪುನರಾವಲೋಚನ,** ಜಯಾ ಪ್ರಕಾಶನ, ವಿಜಯನಗರ, ಬೆಂಗಳೂರು, ೨೦೦೦

೧೧. ನಂಜೇಗೌಡ ಕೆ.(ಪ್ರಸಂ.), **ಗಂಗಾ ಕಾವೇರಿ,** ಸ್ನೇಹಾ ಪ್ರಿಂಟರ್ಸ್, ವಿಜಯನಗರ, ಬೆಂಗಳೂರು, ೨೦೦೦

೧೨. ನೀಲಮ್ಮ ರತಳ್ಳಿ, ಮಹಿಳೆ : ಹಲವು ಮುಖಗಳು, ಶ್ರೀ ರೇಣುಕಾ ಪ್ರಕಾಶನ, ಶರಣನಗರ, ಗುಲಬರ್ಗಾ

೧೩. ಪ್ರಭು ಎಚ್.ಕೆ.ಅನು, ಹಿಂದೂ ಕಾನೂನು, ಎಂ.ಆರ್.ಸತ್ಯನಾರಾಯಣ ಅಕಳವಾಡಿ ಬುಕ್ ಡಿಪೋ, ಪ್ರಕಾಶಕರು, ಮತ್ತು ವಿತರಕರು, ಧಾರವಾಡ

೧೪. ಪಾರ್ವತಮ್ಮ ಲಿಂಗಶೆಟ್ಟಿ, ಹೆಣ್ಣಿನ ದೃಷ್ಟಿಯಲ್ಲಿ ಈ ಶತಮಾನ, ಐ.ಬಿ.ಎಚ್.ಪ್ರಕಾಶನ, ಗಾಂಧಿನಗರ, ಬೆಂಗಳೂರು, ೧೯೯೮

೧೫. ಪ್ರೀತಿ ಶುಭಚಂದ್ರ, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೧೬. ಪೆರ್ಲ ಮಾ.ಭ., ಭಾರತೀಯ ವಿವಾಹ ಸಂಸ್ಕಾರ, ಕನ್ನಡ ಪ್ರಪಂಚ ಪ್ರಕಾಶನ, ಪುತ್ತೂರು, ದಕ್ಷಿಣ ಕನ್ನಡ, ೨೦೦೦

೧೭. ಭೈರಪ್ಪ ಕೆ., ನಗರ ಸಮಾಜ, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಬೆಂಗಳೂರು, ೧೯೯೬

೧೮. ಭೈರಪ್ಪ ಕೆ., ಭಾರತದ ಪ್ರಚಲಿತ ಸಮಸ್ಯೆಗಳು, ಕೇಂಬ್ರಿಡ್ಜ್ ಯೂನಿವರ್ಸಿಟಿ ಪ್ರೆಸ್, ಬೆಂಗಳೂರು, ೧೯೯೬

೧೯. ಮಹೇಶ ತಿಪ್ಪಶೆಟ್ಟಿ, ಸಾಮಾಜಿಕ ಆಲೋಚನೆ, ದಾಳಿಂಬ ಪ್ರಕಾಶನ, ಹುನಗುಂದ, ೧೯೯೫

೨೦. ಮಹೇಶ್ವರಪ್ಪ(ಅನು), ಭಾರತದಲ್ಲಿ ವಿವಾಹ ಮತ್ತು ಕುಟುಂಬ, ಕ.ಅ.ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೭೮

೨೧. ಮಾಳಿ ಎಚ್.ಬಿ., ಸಮಾಜಶಾಸ್ತ್ರ

೨೨. ರವಿಬೆಳಗೆರೆ(ಅನು), ವಿವಾಹ ಹುಟ್ಟು ಮತ್ತು ಪೂರ್ವೋತ್ತರ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೮೩, ೮೫ ೮೯

೨೩. ರಾಜವಾಡೆ ವಿ.ಕಾ., ಭಾರತೀಯ ವಿವಾಹ ಸಂಸ್ಥೆಯ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು,

೨೪. ರಾಜಶೇಖರಯ್ಯ ಎಲ್. ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿವಾಹ ಪದ್ಧತಿ

೨೫. ರಮಾದೇವಿ(ಸಂ), ಊರ್ಧ್ವಮುಖಿ(ಮಹಿಳೆಯ ಸಾಧನೆ, ಸಮಸ್ಯೆ ಹಾಗೂ ಶಿ.ಕೆ.ಸಂಬಂಧಿಸಿದ ಹಲವು ವಿಚಾರಗಳ ಕುರಿತ ಲೇಖನಗಳ ಸಂಕಲನ) ಮಾರ್ಚ್ ೮, ೨೦೦೧

೨೬. ರೋಹಣಿ ಬಿ.ಎಂ., ಸ್ತ್ರೀ ಸಂವೇದನೆ, ಹೇಮಾಂಶು ಪ್ರಕಾಶನ, ದೆರೆಬೈಲು, ಮಂಗಳೂರು, ೧೯೯೫

೨೭. ಲೀಲಾಮುಳ್ಳೃತ್ತಿ, ಆಧುನಿಕ ಸಮಾಜ ಹಾಗೂ ಕೌಟುಂಬಿಕ ಜೀವನದ ಬದಲಾವಣೆಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬

೨೮. ವಾಗೇಶ್ವರಿ ಶಾಸ್ತ್ರಿ, ಹಿಂದೂ ಸ್ತ್ರೀ ಚಿತೆಯಿಂದ ಚಿಂತೆಗೆ, ವಾಗ್ದೇವಿ ಕಲಾನಿಕೇತನ, ತ್ಯಾಗರಾಜನಗರ, ಬೆಂಗಳೂರು, ೧೯೯೫

೨೯. ವಿವಾಹ ಪದ್ಧತಿಗಳು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೩೦. ವಿವಿಧ ಲೇಖಕರು, ಚಿತ್ತವೃತ್ತ, ಸಂದೀಪ ಸಾಹಿತ್ಯ ಅತ್ರಾಡಿ, ಉಡುಪಿ, ದಕ್ಷಿಣ ಕನ್ನಡ

೩೧. ವೀಣಾ ಸಂಕನಗೌಡರ, ಮಹಿಳಾ ಮೇಲಾಗುತ್ತಿರುವ ದೌರ್ಜನ್ಯಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೩೨. ವಿಠಲರಾವ್ ಗಾಯಕ್ವಾಡ್, ಸ್ತ್ರೀವಾದಿ ವಿಮರ್ಶೆ ಸ್ವರೂಪ ಮತ್ತು ಪರಿಕಲ್ಪನೆಗಳು, ೨೦೦೧

೩೩. ವೈದೇಹಿ, ೧೯೯೫, ಬೆಳ್ಳಿಯ ಸಂಕೋಲೆಗಳು, ಅಕ್ಷರ ಪ್ರಕಾಶನ, ಸಾಗರ, ೧೯೯೫

೩೪. ಹೇಮಲತಾ ಮಹಿಷಿ, ಇಪ್ಪತ್ತೊಂದನೆಯ ಶತಮಾನದ ಮಹಿಳೆ, ಕಾನೂನು ಸಮಾಜ ಮತ್ತು ಮಹಿಳೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೯

೩೫. ಶಂಕರರಾವ್ ಚ.ನ., ಭಾರತೀಯ ಸಾಮಾಜಿಕ ಸಂಬಂಧಗಳು

೩೬. ಶಂಕರರಾವ್ ಚ.ನ., ಭಾರತದಲ್ಲಿ ಸಾಮಾಜಿಕ ಸಮಸ್ಯೆಗಳು ಮತ್ತು ಸಾಮಾಜಿಕ ವಿಘಟನೆ

೩೭. ಶಂಕರರಾವ್ ಚ.ನ., ಸಮಾಜಶಾಸ್ತ್ರ ಸಂಪುಟ ೧, ಜೈ ಭಾರತ ಪ್ರಕಾಶನ, ಬೆಂಗಳೂರು, ೧೯೯೫

೩೮. ಶಾರದಾ ಶಾಮಣ್ಣ, ಭಾರತೀಯ ಮಹಿಳೆ (ಪೌರಾಣಿಕ ಹಿನ್ನೆಲೆಯಲ್ಲಿ ತೌಲನಿಕ ವಿಮರ್ಶೆ), ೧೯೯೯

೩೯. ಶ್ರೀಮತಿ ಎಚ್.ಎಸ್.(ಸಂ), ಆಧುನಿಕ ಭಾರತದಲ್ಲಿ ಮಹಿಳೆ, ಮೂಲ : ಜೆರಾಲ್ಡಿನ್ ಫೋಬ್ಸ್, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೪೦. ಶ್ರೀಮತಿ ಎಚ್.ಎಸ್.(ಸಂ), ಮಹಿಳಾ ಅಧ್ಯಯನ ಸಂಪುಟ ೧, ಸಂಚಿಕೆ ೨ ಜುಲೈ, ದಕ್ಷಿಣಾಯನ ಸಂಚಿಕೆ

೪೧. ಸರಸ್ವತಿ ರಿಸಬೂಡ(ಅನು), ಸ್ತ್ರೀ ಪುರುಷ, ಇಳಾ ಪ್ರಕಾಶನ, ಚಾಮರಾಜಪೇಟೆ, ಬೆಂಗಳೂರು, ೧೯೯೨

೪೨. ಸರೋಜ ಕೆ., ಮಹಿಳೆ ಮತ್ತು ಆರೋಗ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೧

## ಪತ್ರಿಕೆಗಳು

೧. ಮಾನಸ, ಸೆಪ್ಟೆಂಬರ್ ೨೦೦೨

೨. ದಿಕ್ಸೂಚಿ, ಆಗಸ್ಟ್ ಜೂನ್, ೨೦೦೨

೩. ಸುಧಾ ೩೦ ಮಾರ್ಚ್ ೨೦೦೩

೪. ಆರೋಗ್ಯವಾಣಿ, ಫೆಬ್ರವರಿ, ೧೯೯೩

೫. ಅಚಲ

## ದಿನಪತ್ರಿಕೆಗಳು

ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಪುರವಣಿ, ದಿನಾಂಕ ೩.೦೩.೨೦೦೨

ಪ್ರಜಾವಾಣಿ ಏಪ್ರಿಲ್ ೨೦೦೩

# ಹೆಣ್ಣುಮಕ್ಕಳ ವಿವಾಹ ವಯಸ್ಸು : ಒಂದು ಅಧ್ಯಯನ

## ಪ್ರಶ್ನಾವಳಿ

೧. ಹೆಸರು :

೨. ಸ್ಥಳ :

೩. ವಯಸ್ಸು :

೪. ಜಾತಿ/ಧರ್ಮ :

೫. ಉದ್ಯೋಗ :

೬. ವಿದ್ಯಾಭ್ಯಾಸ :

೭. ಭಾಷೆ :

೮. ಆದಾಯ :

೯. ಕುಟುಂಬದ ವಿವರ

| ಕ್ರ.ಸಂ. | ಸದಸ್ಯರ ಹೆಸರು | ಸಂಬಂಧಿತ | ವಯಸ್ಸು | ವಿವಾಹ ವಯಸ್ಸು | ವಿದ್ಯಾಭ್ಯಾಸ | ಉದ್ಯೋಗ |
|---|---|---|---|---|---|---|
| ೧ | | | | | | |
| ೨ | | | | | | |
| ೩ | | | | | | |
| ೪ | | | | | | |
| ೫ | | | | | | |
| ೬ | | | | | | |

೧೦. ಚಿಕ್ಕ ವಯಸ್ಸಿಗೆ ವಿವಾಹ ಮಾಡಲು ಕಾರಣ

೧೧. ಹೆಣ್ಣುಮಕ್ಕಳ ವಿವಾಹ ವಯಸ್ಸಿನ ಬಗ್ಗೆ ಅಭಿಪ್ರಾಯವೇನು?

೧೨. ಕಾನೂನಿನ ಪ್ರಕಾರ ಹೆಣ್ಣು ಗಂಡು ಮಕ್ಕಳ ವಿವಾಹ ವಯಸ್ಸು ಎಷ್ಟು?

